ಪ್ರಕಟನೆಯ ೨೮ ನೆಯ ವರ್ಷ : ೧೯೯೩

# ಸಂಕ್ರಮಣ

೨೪೫

ಡಾ. ಕೇಶವಶರ್ಮ ಕೆ.
ವಸಾಹತುಶಾಹಿ ಅನುಭವದ ಹಿನ್ನೆಲೆಯಲ್ಲಿ
ನಾವು ಮತ್ತು ವ್ಯಕ್ತಿತ್ವ

ಎಸ್. ಜಿ. ಸಿದ್ಧರಾಮಯ್ಯ
ಅಂಬಿಗರ ಚೌಡಯ್ಯ : ವ್ಯಕ್ತಿ ಅಭಿವ್ಯಕ್ತಿ

ಡಾ. ಸಂಜೀವ ಕುಲಕರ್ಣಿ
ಹಿಂದೂ-ಮುಸ್ಲಿಂ : ಕೆಲವು ಗ್ರಹಿಕೆಗಳು

ವೇದರಸ
ಧರ್ಮ, ನಾವು ಮತ್ತು ರಾಷ್ಟ್ರ

ಸಿ. ಕೆ. ಮಹೇಶ
ಮನು V/S ಬಸವ

ವಿನಯಾ ನಾಯಕ, ಲಲಿತಾ ಕೆರಿಮನಿ, ಫಣಿರಾಜ್, ವಾಮನ ಬೇಂದ್ರೆ,
ಕೆ. ಪಿ. ದೇವೇಂದ್ರಯ್ಯ, ಡಿ. ಬಿ. ಹತ್ತರಕಿಹಾಳ ಇವರ ಕವನಗಳು

ಚಂಪಾ ಕಾಲಂ
ಕನ್ನಡ ಚಳುವಳಿಯ ಸ್ವರೂಪ

ಸಂಪುಟ ೨೮: ಸಂಚಿಕೆ ೧ ಜನವರಿ ೧೯೯೩

# ಸಂಕ್ರಮಣ

ಜನವರಿ ೧೯೯೩
ಸಂಪುಟ ೨೮ : ಸಂಚಿಕೆ ೧

ಸಂಪಾದಕಿ
ನೀಲಾ ಪಾಟೀಲ
ಸಲಹಾ ಸಂಪಾದಕ
ಚಂದ್ರಶೇಖರ ಪಾಟೀಲ

---



---

**SANKRAMANA 245**
A Monthly in Kannada
January 1993 Vol. XXVIII No. 1
Sankramana Prakashana Dharwad-580 001 Phone : 40509
Printed at Chandana Mudrana, Dharwad-8
Annual Subscription : Rs. 50/-

# ಕನ್ನಡ ಚಳುವಳಿಯ ಸ್ವರೂಪ

## ಚಂದ್ರಶೇಖರ ಪಾಟೀಲ

‘ಕನ್ನಡ’—ಎಂಬುದು ಒಂದು ಭಾಷೆಯ ಕೇವಲ ಹೆಸರು ಮಾತ್ರವಾಗಿರದೆ, ಒಂದು ಭೌಗೋಲಿಕ ಪ್ರದೇಶದಲ್ಲಿ ವಾಸವಾಗಿರುವ ಜನಸಮುದಾಯದ ರಾಜಕೀಯ-ಸಾಮಾಜಿಕ-ಸಾಂಸ್ಕೃತಿಕ ಬದುಕಿನ ಐತಿಹಾಸಿಕ ದಾಖಲೆಯಾಗಿರುವುದರ ಜೊತೆಗೆ ಆ ಜನಸಮುದಾಯದ ವರ್ತಮಾನವನ್ನು ಸಾವಿರ ನಾಲಿಗೆಗಳ ಮೂಲಕ ಅಭಿವ್ಯಕ್ತಿಸುತ್ತಲೇ ಅದನ್ನು ರೂಪಿಸುವ, ಆ ಮುಖಾಂತರ ಭವಿಷ್ಯದ ಅನಂತ ಸಾಧ್ಯತೆಗಳನ್ನು ತೆರೆಯುವ ಮಾಧ್ಯಮವಾಗಿದೆ. ಹಿಂದಿ, ಇಂಗ್ಲಿಶ್, ಮರಾಠಿ, ಇಟಾಲಿಯನ್—ಇವೆಲ್ಲ ನಾಮ ಸಂಕೇತಗಳ ಹಿಂದೆ ಏಕಕಾಲಕ್ಕೆ ವೈಯಕ್ತಿಕವೂ, ಸಾಮಾಜಿಕವೂ, ಭೂತವೂ, ವರ್ತಮಾನವೂ, ಅಂತರಂಗವೂ ಬಹಿರಂಗವೂ ಆದ ಅನುಭವ ಸಮಷ್ಟಿಯ ಧ್ವನಿ ಇರುತ್ತದೆ.

ಅಂದರೆ, “ಕನ್ನಡ ಚಳುವಳಿ” ಕೇವಲ ‘ಭಾಷೆ’ಯ ಬಗೆಗಿನ ಚಳುವಳಿ ಆಗಿರದೆ, ಅದು ಭಾಷೆಯನ್ನು ಒಳಗೊಂಡಂತೆ, ಬದುಕಿನ ಎಲ್ಲ ವಲಯಗಳಿಗೂ ಸಂಬಂಧಪಟ್ಟ ಪ್ರಜ್ಞಾಪೂರ್ವಕ ಸಮಷ್ಟಿ ಪ್ರಯತ್ನವಾಗಿರುತ್ತದೆ. ಇಂದು ಇಂಡಿಯಾ ದೇಶದ ಅನೇಕ ಭಾಗಗಳಲ್ಲಿ (ಉದಾ: ಪಂಜಾಬು, ಜಾರಖಂಡ, ಆಸಾಮ, ತಮಿಳುನಾಡು ಮುಂ) ನಡೆದಿರುವ ಜನಾಂದೋಲನಗಳಿಗೆ ಆರ್ಥಿಕ, ಸಾಮಾಜಿಕ, ರಾಜಕೀಯ ಆಯಾಮಗಳಿರುವಂತೆ, ಅವಕ್ಕೆಲ್ಲ ಮೂಲ ಸೂತ್ರವೆಂಬಂತೆ, ಭಾಷೆಯ ಆಯಾಮವೂ ಇದೆ.

ಅನೇಕ ಧರ್ಮಗಳು, ಮತಗಳು, ಬುಡಕಟ್ಟುಗಳು ಕೂಡಿ ಇರುವ ಇಂಡಿಯಾ ದೇಶಕ್ಕೆ 'ಏಶಿಯಾ ಉಪ ಭೂಖಂಡ' ಎಂಬ ಭೌಗೋಲಿಕ ಚೌಕಟ್ಟಿದ್ದರೂ, ಈ ಭೂಭಾಗಕ್ಕೆ ಹೊರಗಿನಿಂದ ಬಂದ ಆರ್ಯರ ಒಂದು ಭಾಷೆಯಾದ (ಇಂಡೋ-ಯುರೋಪಿಯನ್ ಕುಟುಂಬದ) "ಸಂಸ್ಕೃತ"ದ ಮೌಲಿಕ ಒಂದು "ಧಾರ್ಮಿಕ" ಚೌಕಟ್ಟೂ ಇತ್ತೆಂದು ಕೆಲವರು ವಾದಿಸಿದರೂ ಕೂಡ, ಅಂಥ ಕೃತ್ರಿಮ ಚೌಕಟ್ಟು ಭಗ್ನವಾಗಿ, ಸಹಜವಾಗಿಯೇ ಆಯಾ ನೆಲಗಳ ಗಾಢವಾದ ನಂಟು ಹೊಂದಿದ ಜನ-ಭಾಷೆಗಳು ಇತಿಹಾಸದ ಬೇರೆ ಬೇರೆ ಕಾಲ ಘಟ್ಟಗಳಲ್ಲಿ ತಮಗೆ ನ್ಯಾಯವಾಗಿ ದಕ್ಕಬೇಕಾದ ಸ್ಥಾನಗಳನ್ನು ಹೋರಾಟದ ಮೂಲಕವೇ ಪಡೆದುಕೊಂಡು, 'ಸಂಸ್ಕೃತ'ದಂಥ ಜನ-ದೂರವಾದ ಭಾಷೆಗಳನ್ನು ನೆಲದಿಂದ ದೂರದಲ್ಲಿ, ಕೇವಲ ಆಕಾಶದಲ್ಲಿ, ದಿನಕ್ಕೆ ೧೦-೧೫ ನಿಮಿಷಗಳ ಮಟ್ಟಿಗೆ ಮಾತ್ರ ರೇಡಿಯೋ ತರಂಗಗಳಲ್ಲಿ ಪ್ರೇತಾತ್ಮದ ಹಾಗೆ 'ಜೀವಂತ'ವಾಗಿ ಇಟ್ಟಿರುವುದು ನಾವು ಕಂಡ ವಾಸ್ತವವಾಗಿದೆ. ಈ ದೃಷ್ಟಿಯಿಂದ 'ಇಂಡಿಯಾ' ಎಂಬುದು ಒಂದು ಏಕಮುಖ—ಸಂಸ್ಕೃತಿಯ ನೆಲೆಯಾಗಿರದೆ ಅನೇಕ ಸಂಸ್ಕೃತಿಗಳ ಒಟ್ಟುಗೂಡುವಿಕೆ ಆಗಿದೆ. ಈ ಭೂಖಂಡಕ್ಕೆ ಸಂಬಂಧಿಸಿದ ಯಾವುದೇ ಸಮಸ್ಯೆಯ ಚರ್ಚೆ ಇದರ ಫೆಡರಲ್ ಸ್ವರೂಪದ ಬಹುಮುಖ್ಯ ಅಂಶವನ್ನು ಮರೆಯಲು ಅಥವಾ ಕಡೆಗಣಿಸಲು ಸಾಧ್ಯವಿಲ್ಲ.

ಜನ ಸಮುದಾಯದ ಅನೇಕ ಭಾಗಗಳು—(ಇಂಡಿಯಾದ ಸಂದರ್ಭದಲ್ಲಿ ವರ್ಗಗಳು ಮತ್ತು ಜಾತಿಗಳು) — ಎಚ್ಚರಗೊಂಡು ತಮ್ಮ ಸ್ವಾತಂತ್ರ್ಯಕ್ಕಾಗಿ, ಸ್ವಂತಿಕೆಗಾಗಿ ಹೋರಾಟ ಪ್ರಾರಂಭಿಸಿದಾಗ ಸಹಜವಾಗಿಯೇ ಜನಭಾಷೆಗಳೂ ಮಹತ್ವ ಪಡೆಯುತ್ತವೆ. ವೈದಿಕಶಾಹಿಯ ಮೂಲ ಪ್ರಚಾರ ಮಾಧ್ಯಮವಾಗಿದ್ದ ಸಂಸ್ಕೃತದ ವಿರುದ್ಧ ಸಿಡಿಯುತ್ತಲೇ ಇಂಡಿಯಾದ ಜನ-ಭಾಷೆಗಳು ನೂರಾರು ವರ್ಷಗಳಿಂದ ತಮ್ಮ ಸಂಸ್ಕೃತಿಯನ್ನು ಸಮೃದ್ಧವಾಗಿ ಬೆಳೆಸುತ್ತಲೇ ಬಂದವು. ಇತ್ತೀಚಿನ ಎರಡು ಶತಕಗಳಲ್ಲಿ ಬ್ರಿಟಿಶರ ಆಗಮನದಿಂದಾಗಿ ಹಿಂದೆ ಎಂದೂ ಇಲ್ಲದಿದ್ದ 'ರಾಜನೈತಿಕ' ಮತ್ತು 'ಆಡಳಿತಾತ್ಮಕ' ಚೌಕಟ್ಟನ್ನು ಹೊಂದಿದ ಇಂಡಿಯಾದ ವಿಭಿನ್ನ ಭೂಭಾಗಗಳು ಪರಕೀಯ ಆಡಳಿತದಿಂದ ಬಿಡುಗಡೆ ಪಡೆಯಲು ಹೋರಾಟ ಸುರು ಮಾಡಿದಾಗ, ಆ ಹೋರಾಟದ ಅಂಗವಾಗಿಯೇ ತಮ್ಮ ತಮ್ಮ ನೆಲದ ಭಾಷೆಗಳ ಸುತ್ತ ತಮ್ಮ ವಿಶಿಷ್ಟ ಸಂಸ್ಕೃತಿಗಳಿಗೆ ಬಲವಾದ ಬೇರುಗಳನ್ನು ಹೊಂದುವ, ಆ ಮೂಲಕ ಆಕಾಶದಲ್ಲಿ ಟೊಂಗೆ ಅರಳಿಸುವ ಪ್ರತಿಕ್ರಿಯೆಯಲ್ಲೂ ತೊಡಗಿದ್ದವು. ಕರ್ನಾಟಕದ ಮಟ್ಟಿಗಂತೂ ಈ ಮಾತು ಸಂಪೂರ್ಣ ಅನ್ವಯವಾಗುವಂಥದು. ಮೊದಲು ೨೨ ಆಡಳಿತಗಳಲ್ಲಿ, ನಂತರ ೫ ಆಡಳಿತಗಳಲ್ಲಿ ಹಂಚಿಕೊಂಡಿದ್ದ ಕನ್ನಡ ಭಾಷಿಕರ ನಾಡು 'ಕರ್ನಾಟಕ'ವಾಗಿ ಒಂದೇ ಆಡಳಿತ ಛತ್ರದಡಿಯಲ್ಲಿ ಬರಬೇಕೆಂದು

ನಡೆಸಿದ ಏಕೀಕರಣದ ಹೋರಾಟ ಇಂಡಿಯಾದ ಸ್ವಾತಂತ್ರ್ಯದ ಒಂದು ಭಾಗವೇ ಆಗಿತ್ತು. ೧೯೪೭ ರಲ್ಲಿ ರಾಜಕೀಯ ಸ್ವಾತಂತ್ರ್ಯ ಪಡೆದ ಇಂಡಿಯಾ, ಮುಂದೆ ಒಂಬತ್ತು ವರ್ಷಗಳಲ್ಲಿ (೧೯೫೬) ಭಾಷಾವಾರು ಪ್ರಾಂತ ರಚನೆ ಮಾಡಿಕೊಂಡದ್ದು ಅನಿವಾರ್ಯವಾದ, ಸಹಜವಾದ ಪ್ರಕ್ರಿಯೆಯ ಫಲವಾಗಿತ್ತು.

ಇಂಡಿಯಾದ ಫೆಡರಲ್ ಸ್ವರೂಪಕ್ಕೆ ತಕ್ಕುದಾದ ರೀತಿಯಲ್ಲಿಯೇ ಭಾಷಾವಾರು ಪ್ರಾಂತರಚನೆ ವಿಕೇಂದ್ರೀಕರಣದ ಪ್ರಥಮ, ನಿರ್ಣಾಯಕ ಹೆಜ್ಜೆಯಾಗಿತ್ತು. ಇದರಿಂದಾಗಿ ಆಯಾ ಭಾಷಾ-ರಾಜ್ಯಗಳು ಬಲಿಷ್ಠವಾಗಬೇಕು; ಮತ್ತು 'ಕೇಂದ್ರ' ಎಂಬುದು ಈ ಬಲಿಷ್ಠ ರಾಜ್ಯಗಳನ್ನು ಸಮತೋಲನದಿಂದ ಕಾಯುವ, ಪರಸ್ಪರ ಸಂಘರ್ಷಗಳನ್ನು ತಪ್ಪಿಸುವ, ಶೋಷಣೆಗಳನ್ನು ನಿಯಂತ್ರಿಸುವ ಒಂದು ವ್ಯವಸ್ಥೆಯಾಗಿರಬೇಕು—ಎಂಬುದು ಈ ಪ್ರಕ್ರಿಯೆಯ ಮುಂದಿನ ಗುರಿಯಾಗಬೇಕಿತ್ತು. ಈ ಗುರಿ ತಪ್ಪಿದ್ದರಿಂದಲೇ ಇಂದು ದೇಶದ ತುಂಬೆಲ್ಲ ಪ್ರಾದೇಶಿಕ ಅಸಮಾನತೆಯ ಕೂಗೆದ್ದು, "ಪ್ರತ್ಯೇಕತೆಯ" ಅನ್ನುವಷ್ಟು ಮಟ್ಟಿಗಿನ ಜನಾಂದೋಲನಗಳು ಹುಟ್ಟಿ ವಾತಾವರಣ ಕೋಲಾಹಲಮಯವಾಗಿದೆ. ಇದರ ಜೊತೆಗೇ ಸಾವಿರಾರು ವರ್ಷಗಳಿಂದ ಆಳುತ್ತಲೇ ಬಂದಿರುವ ವೈದಿಕಶಾಹಿ ಶಕ್ತಿಗಳು 'ರಾಜಕೀಯ' ವನ್ನು 'ಧರ್ಮ'ದೊಂದಿಗೆ ತಳಕು ಹಾಕುತ್ತ, ಅನೇಕ ಸಂಸ್ಕೃತಿಗಳ ಸಂಗಮವಾಗಿರುವ ದೇಶವನ್ನು ಮತ್ತೆ ಏಕ-ಸಂಸ್ಕೃತಿಯ ಕಡೆಗೆ ಒಯ್ಯಲು ಪ್ರಯತ್ನಿಸುತ್ತ, ಜನತೆಯ ಭಾವನೆಗಳನ್ನು ಅಗ್ಗದ ರೀತಿಯಲ್ಲಿ ಕೆರಳಿಸುತ್ತ ಕೋಲಾಹಲವನ್ನು ಹೆಚ್ಚಿಸುತ್ತಿವೆ.

'ಶಕ್ತಿ' ಎಂಬುದು ಹರಡಿಕೊಂಡಾಗ ವಿರಳವಾಗುತ್ತದೆ; ಏಕೀಕೃತಗೊಂಡಾಗ ಬಲಿಷ್ಠವಾಗುತ್ತದೆ. ಈ ಸತ್ಯವನ್ನು ಬಲ್ಲ ನಮ್ಮ ದೇಶದ ಆಳುವ ವರ್ಗಗಳು ರಾಜಕೀಯ ಶಕ್ತಿಯನ್ನು ಕೇಂದ್ರೀಕರಿಸುವತ್ತ ಮಗ್ನವಾಗಿದ್ದರಿಂದಲೇ ಇಂದು ಸ್ವಾತಂತ್ರ್ಯ ದೊರೆತು ನಾಲ್ಕು ದಶಕಗಳ ನಂತರ — ಈ ಕೇಂದ್ರೀಕರಣದ ವಿರುದ್ಧ ಹೋರಾಟ ಸಾಗುತ್ತಿದೆ. ಈ ಹೋರಾಟದ ರಾಜಕೀಯ, ಸಾಮಾಜಿಕ ಸ್ವರೂಪ ಎಲ್ಲ ಭಾಷಾವಾರು ರಾಜ್ಯಗಳಲ್ಲಿ ಹೆಚ್ಚು ಕಡಿಮೆ ಸಾಮಾನ್ಯವಾಗಿಯೇ ಇದ್ದರೂ ಆಯಾ ರಾಜ್ಯದ ಭಾಷೆಗಳನ್ನು ನೆಲೆಗೊಳಿಸುವ ವಿಷಯದಲ್ಲಿ ಮಾತ್ರ ಕತೆ ಬೇರೆ ಬೇರೆಯಾಗಿದೆ. ಉದಾ : ನಮ್ಮ ನೆರೆಯ ಮಹಾರಾಷ್ಟ್ರ, ಆಂಧ್ರ ಪ್ರದೇಶ, ಕೇರಳ, ತಮಿಳುನಾಡುಗಳಲ್ಲಿ ಕರ್ನಾಟಕದಲ್ಲಿ ಇರುವಂತೆ "ಕಾವಲು ಸಮಿತಿ"ಗಳಾಗಲಿ, "ಅಭಿವೃದ್ಧಿ ಪ್ರಾಧಿಕಾರ"ಗಳಾಗಲಿ ಒಡೆದು ಕಾಣುವ ಹಾಗೆ ಅಸ್ತಿತ್ವದಲ್ಲಿಲ್ಲ. ಅಲ್ಲಿ ಆಯಾ ಜನ-ಭಾಷೆಯ ಅನುಷ್ಠಾನ ಸರಕಾರಿ ಆಡಳಿತ ಯಂತ್ರದ ಸಹಜವಾದ ಶೈಲಿಯಾಗಿದೆ; ಮೇಲಾಗಿ ಅಲ್ಲಿಯ ಜನಸಮುದಾಯದ ಸಹಜ ಸಂಕಲ್ಪವಾಗಿದೆ.

ಕನ್ನಡ ನಾಡಿನಲ್ಲಿ ಇಂಥ 'ಸಹಜ' ಸ್ಥಿತಿ ಇಲ್ಲದಿರುವುದಕ್ಕೆ ನಾವು ಕೇವಲ ಈ ನಾಡಿನ ಇತಿಹಾಸವನ್ನು (ಅಂದರೆ, ಅನೇಕ ಭೂಭಾಗಗಳಲ್ಲಿ ಚೆಂದಿಯಾಗಿ ಹೋಗಿದ್ದ ವಾಸ್ತವವನ್ನು) ಕಾರಣವಾಗಿ ಕೊಡಲು ಬರುವಂತಿಲ್ಲ. ಏಕೆಂದರೆ 'ಇತಿಹಾಸ' ಎಂಬುದು ಸಾರ್ವಕಾಲಿಕ ಮಾಡೆಲ್ ಆಗಬೇಕಾಗಿಲ್ಲ: ಇತಿಹಾಸವನ್ನು ನಾವು ಬದಲಿಸಲು ಸಾಧ್ಯ. ಉಳಿದ ರಾಜ್ಯಗಳಲ್ಲಿ ಸಾಧ್ಯವಾದದ್ದು ನಮ್ಮ ರಾಜ್ಯದಲ್ಲಿ ಸಾಧ್ಯವಾಗದೆ ಇರುವುದೇ ನಮ್ಮ ದುರಂತ.

ನಮ್ಮ ಬದುಕಿನ ಬಹು ಮುಖ್ಯ ಭಾಗವನ್ನು ಅನೇಕ ನೆಲೆಗಳಲ್ಲಿ ನಿಯಂತ್ರಿಸಬಲ್ಲ, ರೂಪಿಸಬಲ್ಲ ಶಕ್ತಿ ಸರಕಾರಕ್ಕಿದೆ. ಪ್ರಜಾತಂತ್ರದಲ್ಲಿ ಈ ಸರಕಾರ ಜನರ ಆಶೋತ್ತರಗಳ, ಹಕ್ಕುಗಳ ಪ್ರತಿನಿಧಿಯಾಗಿರುತ್ತದೆ ಆದರೆ ನಮ್ಮೆಲ್ಲರ 'ಮತ' ಗಳನ್ನು ಪಡೆದು, ನಮ್ಮ ಧ್ವನಿಗಳಾಗಿ ಶಾಸನಸಭೆ-ಲೋಕಸಭೆಗಳನ್ನು ಪ್ರವೇಶಿಸುವ, ರಾಜ್ಯದಲ್ಲಿ ಮಂತ್ರಿಮಂಡಲ ರಚಿಸುವ ಜನಕ್ಕೆ ಮಾತ್ರ ಕನ್ನಡದ ಬಗ್ಗೆ ದೃಢವಾದ ಸಂಕಲ್ಪವಿಲ್ಲ. ಇದಕ್ಕೆ ಕಾರಣ; ಹಳೇ ಮೈಸೂರು ಸಂಸ್ಥಾನದ ಕಾಲದಲ್ಲಿ ಹೊರನಾಡಿನಿಂದ ಕನ್ನಡ ನಾಡಿಗೆ ಬಂದವರು ಮತ್ತು ಏಕೀಕರಣವಾದ ನಂತರ ಹೊರಗಡೆಯಿಂದ ಬಂದ ಅಧಿಕಾರಿಗಳು ಅಧಿಕಾರಶಾಹಿಯ ಕೇಂದ್ರಗಳನ್ನು ಆಕ್ರಮಿಸಿರುವುದು; ಮತ್ತು ಮಂತ್ರಿ-ಶಾಸಕರು ಈ ಅಧಿಕಾರಿ ವರ್ಗವನ್ನು ನಿಯಂತ್ರಿಸುವಲ್ಲಿ ಸೋತಿರುವುದು.

ಇಂಥ ಅನಿವಾರ್ಯ ಪ್ರಸಂಗದಲ್ಲಿ ಭಾಷೆಯನ್ನು ಬದುಕಿಸಬಲ್ಲದ್ದು ಜನಶಕ್ತಿ ಮಾತ್ರ. ಬೆಂಗಳೂರು ಹಾಗೂ ಸುತ್ತಮುತ್ತ ಅನಕೃ ರಾಮಮೂರ್ತಿ ಮುಂತಾದವರು ಪ್ರಾರಂಭಿಸಿದ ಕನ್ನಡ ಚಳುವಳಿಯನ್ನು ತಮ್ಮದೇ ಆದ ರೀತಿಗಳಲ್ಲಿ, ಮಿತಿಗಳಲ್ಲಿ, ವಾಟಾಳ ನಾಗರಾಜ, ನಾರಾಯಣ ಕುಮಾರ ಜಿ. ನಾರಾಯಣ, ಸಿದ್ದಯ್ಯ ಪುರಾಣಿಕ, ಚಿದಾನಂದಮೂರ್ತಿ, ರಾಮಣ್ಣ ಕೋಡಿಹೊಸಳ್ಳಿ, ರಹಮಾನಖಾನ ಮುಂತಾದವರು ಮುಂದುವರಿಸಿದ್ದಾರೆ ಏಕೀಕರಣದ ನಂತರ ಕನ್ನಡ ಚಳುವಳಿಗೆ ಬೃಹತ್ತಾದ, ವ್ಯಾಪಕವಾದ 'ಜನಾಂದೋಲನ'ದ ಸ್ವರೂಪ ಒದಗಿದ್ದು ೧೯೮೦-೮೧ರಲ್ಲಿ ಗುಂಡೂರಾವ್ ಸರಕಾರ, ಪ್ರೌಢಶಾಲೆಯಲ್ಲಿ ಸಂಸ್ಕೃತ ಸ್ಥಾನದ ನಿರ್ಣಯಿಸಲು ಡಾ. ವಿ. ಕೃ. ಗೋಕಾಕರ ನೇತೃತ್ವದಲ್ಲಿ ಒಂದು ಸಮಿತಿ ರಚಿಸಿ, ಆ ಸಮಿತಿ ಕನ್ನಡಿಗರ ಒತ್ತಡಕ್ಕೆ ಮನ್ನಣೆ ಇತ್ತು ಕನ್ನಡಕ್ಕೆ ಅಗ್ರಪಟ್ಟ ನೀಡಿ ಸಲ್ಲಿಸಿದ ವರದಿಯ ಅನುಷ್ಠಾನದ ಬಗ್ಗೆ ಹಿಂದೆ-ಮುಂದೆ ನೋಡಿದಾಗ ಭುಗಿಲೆದ್ದ 'ಗೋಕಾಕ ಚಳುವಳಿ' ಮೂಲಕ. ಉತ್ತರ ಕರ್ನಾಟಕದ ಹಿರಿಯರಾದ ಶಂಬಾ ಜೋಶಿ, ಆರ್. ಸಿ. ಹಿರೇಮಠ, ಬಸವರಾಜ ಕಟ್ಟೀಮನಿ, ಪಾಟೀಲ ಪುಟ್ಟಪ್ಪ, ರಾ. ಯ. ಧಾರವಾಡಕರ

ಮುಂತಾದವರನ್ನು ಮುಂದೆ ಮಾಡಿಕೊಂಡು ಕಿರಿಯ ಪೀಳಿಗೆಯ ಅನೇಕ ಸಾಹಿತಿಗಳು, ಕಲಾವಿದರು, ಪತ್ರಕರ್ತರು, ರೈತರು, ಕಾರ್ಮಿಕರು, ವಿದ್ಯಾರ್ಥಿಗಳ ಬೆಂಬಲದೊಂದಿಗೆ ಕನ್ನಡ ಕ್ರಿಯಾಸಮಿತಿ ಹೂಡಿದ ಈ ಚಳುವಳಿ, ಮುಂದೊಂದು ನಿರ್ಣಾಯಕ ಘಟ್ಟದಲ್ಲಿ ಡಾ. ರಾಜಕುಮಾರರೇ ಮೊದಲಾಗಿ ಜನಪ್ರಿಯ ಚಿತ್ರ ತಾರೆಗಳನ್ನು ಒಳಗೊಂಡಾಗ ಇಡೀ ನಾಡಿನಲ್ಲಿ ಹಿಂದೆಂದೂ ಕಾಣದ ಚಳುವಳಿಯ ಬೆಂಕಿ, ಬೆಳಕು ಕಾಣಿಸಿಕೊಂಡಿತ್ತು. ಗೋಕಾಕ ಚಳುವಳಿ ಬಿಡುಗಡೆ ಮಾಡಿದ ಶಕ್ತಿ ತರಂಗಗಳೇ ಇಂದಿಗೂ ಕನ್ನಡಿಗರನ್ನು ನಿರಂತರ ಜಾಗೃತಿಯಲ್ಲಿ ಇಡುವ ಕಾರ್ಯದಲ್ಲಿ ನಿರತವಾಗಿವೆ; ಸರಕಾರದ ಮೇಲೆ ಒತ್ತಡ ತರುವಲ್ಲಿ ಯಶಸ್ವಿಯಾಗುತ್ತಿವೆ. "ಕನ್ನಡ ನಿಷ್ಠೆ" ಎಂಬುದು ಕೇವಲ ಕನ್ನಡ ಭುವನೇಶ್ವರಿಗೆ ಸಲ್ಲುವ ಸೇವೆಯಾಗಿರದೆ, ಅದು ಮತ ಗಳಿಸುವ ಪ್ರಬಲ ಚುಂಬಕ ಎಂಬ ವಾಸ್ತವದ ಅರಿವು ಹೆಚ್ಚತೊಡಗಿದಂತೆ ಸರಕಾರದ ಮೂಲಕ ಕನ್ನಡದ ಕೆಲಸಗಳು ಹೆಚ್ಚುಗುವುದು ಸಹಜ.

ಕನ್ನಡ ಚಳುವಳಿ' ಎಂಬುದು ನಮ್ಮ ನಾಡಿನಲ್ಲಿ ಒಂದು ನಿರಂತರ ಜಾಗೃತಿಯ ಪ್ರಕ್ರಿಯೆಯಾಗಿ ಉಳಿಯಬೇಕಾಗಿರುವ ಅನಿವಾರ್ಯ ಸ್ಥಿತಿಯಲ್ಲಿ ಇಂಥ ಚಳುವಳಿಗೆ ಆಂತರಿಕ ಸತ್ವವನ್ನು ನೀಡುವ ದೃಷ್ಟಿಯಿಂದ ಕೆಲ ಅಂಶಗಳತ್ತ ಗಮನ ಹರಿಸುವುದು ಒಳ್ಳೆಯದು.

'ಭಾಷೆ' ಎಂಬುದು ಭಾವನಾತ್ಮಕ ನೆಲೆಯಲ್ಲಿ ಪ್ರಮುಖವಾಗಿ ಕೆಲಸ ಮಾಡುತ್ತದೆ. ಭಾಷಾ ಚಳುವಳಿಯೊಂದನ್ನು ಮತಾಂಧ ಶಕ್ತಿಗಳು ತಮ್ಮ ಸ್ವಾರ್ಥಕ್ಕೆ ಬಳಸಲು ಅನುವಾಗದಂತೆ ರೂಪಿಸುವುದು ಎಲ್ಲರ ಜವಾಬ್ದಾರಿ. (ಗೋಕಾಕ ಚಳುವಳಿ ಕಾಲಕ್ಕೆ ಆರ್ ಎಸ್ ಎಸ್ ಮತಾಂಧರು ಒಂದು ಘಟ್ಟದಲ್ಲಿ "ಕನ್ನಡ ಪ್ರೇಮ" ವನ್ನು "ಮುಸ್ಲಿಂ-ದ್ವೇಷ" ವನ್ನಾಗಿ ಪರಿವರ್ತಿಸಲು ಪ್ರಯತ್ನಿಸಿದ್ದರು.)

ಈ ದೇಶದಲ್ಲಿ ಸಂಪನ್ಮೂಲಗಳು ಮತ್ತು ಉದ್ಯೋಗಾವಕಾಶಗಳು ಸಮಸಮವಾಗಿ ಹರಡಿಕೊಂಡಿಲ್ಲವಾದ್ದರಿಂದ ಒಂದು ಭಾಗದಿಂದ ಇನ್ನೊಂದು ಭಾಗಕ್ಕೆ ಜನರು ವಲಸೆ ಹೋಗುವುದು ಅನಿವಾರ್ಯ. ಇದು ಸಂವಿಧಾನದತ್ತವಾದ ಹಕ್ಕೂ ಆಗಿದೆ. ಹೀಗೆ ವಲಸೆ ಬರುವ ಜನ ತಮ್ಮ ತಮ್ಮ "ಭಾಷೆ"ಗಳ ರಾಯಭಾರಿಗಳಾಗಿ ತಮ್ಮ ಭಾಷಾ-ಸಾಮ್ರಾಜ್ಯದ ಅಶ್ವಮೇಧ ಕುದುರೆಗಳಾಗಿ ಬಂದವರೇನೂ ಅಲ್ಲ ; ಆದರೂ ಅವರಿಗೆ ತಮ್ಮ ಭಾಷೆಗಳ ಮೇಲೆ ಪ್ರೀತಿ, ಅವುಗಳನ್ನು ಉಳಿಸಿಕೊಳ್ಳಬೇಕೆಂಬ ಹಂಬಲ, ಇರುವುದು ಸಹಜವೇ. ಇಂಥ ಭಾಷಾ–ಅಲ್ಪ ಸಂಖ್ಯಾತರ, ಬಗ್ಗೆ ನಾವು– ಅಂದರೆ ಕನ್ನಡ ಚಳುವಳಿಗಾರರು – ತಳೆಯುವ ಧೋರಣೆ ಇಂಡಿಯಾದ ಒಟ್ಟು

ಜನಸಮುದಾಯದ ಹಿತಕ್ಕೆ ಅನುಗುಣವಾಗಿ ಆರೋಗ್ಯಪೂರ್ಣವಾಗಿ ಇರಬೇಕಾಗುತ್ತದೆ. ಅವರು ನಮ್ಮ ರಾಜ್ಯದ ಭಾಷೆಯನ್ನು ಅನಿವಾರ್ಯವಾಗಿಯಾದರೂ, ಪ್ರೀತಿಯಿಂದ, ಕಲಿಯುವಂಥ ವಾತಾವರಣ ನಿರ್ಮಿಸಬೇಕು. ಇಲ್ಲಿ ಉದ್ಯೋಗ ಬಯಸುವವರಿಗೆ ಇಲ್ಲಿಯ ಭಾಷೆಯ ಜ್ಞಾನ ಅನಿವಾರ್ಯ ಎಂಬ ಪರಿಸ್ಥಿತಿ ನಿರ್ಮಾಣವಾದಾಗ ಈ ಭಾಷಾ ಅಲ್ಪ ಸಂಖ್ಯಾತರು ಕನ್ನಡದ ಮುಖ್ಯಧಾರೆಯಲ್ಲಿ, ತಮ್ಮ ಸ್ವಂತಿಕೆಯನ್ನು ಉಳಿಸಿಕೊಂಡೂ ಬೆರೆಯುವುದು ಸಾಧ್ಯವಾದೀತು. ಒಟ್ಟಿನಲ್ಲಿ ಭಾಷೆ ಎಂಬುದು ಹೃದಯಗಳನ್ನು ಬೆಸೆಯುವ ಕೊಂಡಿಯಾಗಬೇಕೇ ಹೊರತು. ಒಂದು ಭಾಷಾ-ಸಮುದಾಯವನ್ನು "ರಾಜ್ಯದಿಂದ ಹೊರಗೆ ಓಡಿಸುವ" ಫ್ಯಾಶಿಸ್ಟ್ ಶಕ್ತಿಗಳ ಕೈಯೊಳಗಿನ ಕೊಡಲಿಯಾಗಬಾರದು.

ಕರ್ನಾಟಕದಲ್ಲಿ ಕನ್ನಡ ಬಹು ಜನರ ಭಾಷೆ. ಈ ಭಾಷೆಯೇ ಇಲ್ಲಿಯ ಆಡಳಿತ, ಕಾನೂನು, ಶಿಕ್ಷಣಗಳಲ್ಲಿ ಅಗ್ರಮಾನ್ಯವಾಗಬೇಕು. ಇದರ ಜೊತೆಗೇ ಈ ನಾಡಿನಲ್ಲಿ ಇರುವ ಇತರ ಭಾಷೆಗಳು (ತುಳು, ಕೊಡವ, ಕೊಂಕಣಿ ಮುಂ) ತಮ್ಮ ಸುತ್ತಲೂ ವಿಶಿಷ್ಟ ಉಪಸಂಸ್ಕೃತಿಗಳನ್ನು ಬೆಳೆಸಿಕೊಂಡಿರುತ್ತವೆ. ಕನ್ನಡ ಚಳುವಳಿ ಈ ಉಪ ಸಂಸ್ಕೃತಿಗಳ ವೈಶಿಷ್ಟ್ಯ ಕಾಪಾಡಲು ಪ್ರಯತ್ನಿಸುವುದರ ಮೂಲಕವೇ ಅವು ಕನ್ನಡ ಸಂಸ್ಕೃತಿಗೆ ಪೂರಕವಾಗಿಯೇ ಬೆಳೆಯುವಂತೆ ಮಾಡಲು ಸಾಧ್ಯ.

ಇನ್ನೊಂದು ಮುಖ್ಯ ವಿಷಯ ; ಕರ್ನಾಟಕ ರಾಜ್ಯ ಒಂದು ಪ್ರತ್ಯೇಕ 'ರಾಷ್ಟ್ರ'ವೇ ಆಗಿದ್ದರೆ, ಆ ಮಾತೇ ಬೇರೆ. ಅದು ಇಂಡಿಯಾ ಒಕ್ಕೂಟದ ಒಂದು ಭಾಗವಾಗಿರುವುದರಿಂದ, ದೇಶದ ಎಲ್ಲ ರಾಜ್ಯಗಳ ನಡುವಿನ ಸಂಪರ್ಕ ಭಾಷೆಯಾಗಿ ಒಂದು ಭಾಷೆಯನ್ನು ನಾವೆಲ್ಲ ಒಪ್ಪಲೇಬೇಕಾಗುತ್ತದೆ. ಈ ವಿಷಯದಲ್ಲಿ ಕೆಲವರು ಇಂಡಿಯಾದ ರಾಜ್ಯ-ರಾಜ್ಯಗಳ ನಡುವೆ ಮತ್ತು ಇಂಡಿಯಾ ಹಾಗೂ ಹೊರ ರಾಷ್ಟ್ರಗಳ ನಡುವೆ ಹೀಗೆ ಎರಡೂ ನೆಲೆಗಳಲ್ಲಿ ಇಂಗ್ಲಿಷ್ ಭಾಷೆಯೇ ಯಾಕೆ ಇರಬಾರದು ಅಂತ ವಾದಿಸುತ್ತಾರೆ. ಆದರೆ, ಇಂಡಿಯಾದ ಒಳಗಡೆಯ ಸಂಪರ್ಕ ಭಾಷೆಯಾಗಿ ನಮ್ಮದೇ ಆದ ಯಾವುದಾದರೂ ಜನ-ಭಾಷೆ ಇರುವುದು ಮುಖ್ಯ. ಈಗಿನ ಸ್ಥಿತಿಯಲ್ಲಿ ಕನ್ನಡ-ಹಿಂದಿ-ಇಂಗ್ಲಿಷ್ ಎಂಬ ತ್ರಿಭಾಷಾ ಸೂತ್ರವೇ ಇಡೀ ದೇಶಕ್ಕೆ ತಾರಕ.

*

ಕೊನೆಯದಾಗಿ, ಯಾವುದೇ ಚಳುವಳಿ 'ಚಳುವಳಿ' ಅನ್ನಿಸಿಕೊಳ್ಳಬೇಕಾದರೆ ಅದಕ್ಕೆ ಸೈದ್ಧಾಂತಿಕ ಚೌಕಟ್ಟು, ಸಂಘಟನಾತ್ಮಕ ಶಿಸ್ತು ಮತ್ತು ಗಟ್ಟಿಯಾದ ನಾಯಕತ್ವ ಬೇಕು. ಕರ್ನಾಟಕದಲ್ಲಿ ಅನೇಕ ಸಂಘಟನೆಗಳಿವೆ, ಉದಾ ಅ. ಕ. ಕೇಂದ್ರ ಕನ್ನಡ ಕ್ರಿಯಾಸಮಿತಿ; ಡಾ. ರಾಜಕುಮಾರ ಅಭಿಮಾನಿಗಳ ಸಂಘ; ಕನ್ನಡ ಶಕ್ತಿ ಕೇಂದ್ರ,

ಕನ್ನಡ ಚಳುವಳಿ ಕೇಂದ್ರ ಸಮಿತಿ; ಕನ್ನಡ ಸಂಘರ್ಷ ಸಮಿತಿ, ಮುಂತಾದವು. ಎಲ್ಲ ಸಂಘಟನೆಗಳ 'ಒಕ್ಕೂಟ'ಕ್ಕಾಗಿ ಕೂಡ ಇತ್ತೀಚೆಗೆ ಪ್ರಯತ್ನ ನಡೆಯುತ್ತಿವೆ. ಒಂದು ಒಡೆದು ಕಾಣುವ ಮುಖ್ಯ ಕೊರತೆ ಅಂದರೆ, 'ನಾಯಕ'ರು ಅನ್ನಿಸಿಕೊಂಡವರಲ್ಲಿ ಪ್ರಾಮಾಣಿಕತೆಯ ಅಭಾವ. ಅನೇಕ ನಾಯಕರಿಗೆ ಬೇರೆ ಬೇರೆ ರಾಜಕೀಯ ಪಕ್ಷಗಳ ಬಗ್ಗೆ, ರಾಜಕೀಯ ಯುಕ್ತಿಗಳ ಬಗ್ಗೆ ವೈಯುಕ್ತಿಕ ವ್ಯಾಮೋಹ. ರಾಜಧಾನಿಯಲ್ಲಿ ವಿಧಾನ ಸೌಧದ ಸಮೀಪದಲ್ಲಿರುವ ನಾಯಕರಿಗೆ ಮೇಲಿಂದ ಮೇಲೆ ಮಂತ್ರಿಗಳನ್ನು ಕಾಣುವ ಚಪಲ; ಒಮ್ಮೊಮ್ಮೆ ಸರಕಾರದ 'ವಕ್ತಾರ'ರಾಗಿ ಅಪ್ಪಣೆ ಕೊಡಿಸುವ ಹುಚ್ಚು ಚಟ. ತಮ್ಮ ಮಕ್ಕಳನ್ನು ಇಂಗ್ಲಿಷ್ ಕಾನ್ವೆಂಟುಗಳಿಗೆ ಕಳಿಸುತ್ತಿದ್ದರೂ ಕನ್ನಡ ಮಾಧ್ಯಮದ ಬಗ್ಗೆ ಶಂಖ ಊದುವ ಹವ್ಯಾಸ ಹಲವರದು; ಮತ್ತೂ ಕೆಲ ವರದು, ಕನ್ನಡಕ್ಕಾಗಿ ಹೋರಾಟ ಮಾಡುತ್ತ ಯಾರೋ ಕಷ್ಟಪಟ್ಟು ತಯಾರಿಸಿದ ಹಂತ್ತಗಳಲ್ಲಿ – (ಅಧಿಕಾರ ಸ್ಥಾನಗಳಲ್ಲಿ) – ಹೇಗೋ ಹಾವಾಗಿ ಸೇರಿಕೊಂಡು ಬಿಡುವ ಮಹತ್ವಾಕಾಂಕ್ಷೆ.

ಇಂಥ ಎಲ್ಲ ವೈರುಧ್ಯಗಳ ನಡುವೆಯೂ ಕನ್ನಡದ ಜನತೆ ಇಂದು ಕನ್ನಡ ಪ್ರಜ್ಞೆ ಯನ್ನು ಸ್ಪಷ್ಟವಾಗಿ ರೂಪಿಸಿಕೊಳ್ಳುತ್ತಿದೆ. ಕರ್ನಾಟಕದ ಅನೇಕ ಸಂಘಟನೆಗಳು ನಡೆಸುವ ಸಭೆ-ಸಮಾರಂಭಗಳು, ಮುಖ್ಯವಾಗಿ ಕ. ಸಾ. ಪರಿಷತ್ತು ಹಮ್ಮಿಕೊಳ್ಳುವ ಅಖಿಲ ಭಾರತ ಮಟ್ಟದ ಕನ್ನಡ ಸಾಹಿತ್ಯ ಸಮ್ಮೇಳನಗಳು ಕನ್ನಡಿಗರ ಕನ್ನಡತ್ವ ವನ್ನು ಕ್ರೋಢೀಕರಿಸುವ ರೀತಿಯಲ್ಲಿ ನಡೆಯುತ್ತಿರುವುದು ಆಶಾದಾಯಕ ಅಂಶ.

ಯಾವುದೇ ಚಳುವಳಿಯ ಮುಂದುವರಿಕೆಗೆ, ಎಲ್ಲ ಅರಕೆಗಳ ನಡುವೆಯೂ, ನಾಳೆಯ ಬಗ್ಗೆ ಇರುವ ಇಂಥ ಆಶಾ ಭಾವನೆಯೇ ಪ್ರಚೋದಕ ಶಕ್ತಿಯಾಗಿರುತ್ತದೆ. ●

ವಿನಯ ನಾಯಕ

---

## ಹೊಸ ವರುಷ

ಇವನ ಕಾಲ ಉಗುರುಗಳು
ಇನ್ನು ಕತ್ತರಿಸುತ್ತವೆ
ಕಂದನ ಕದಪ ಕೆಂಪನ್ನ
ಹೂವಿನ ಹರೆಯುವನ್ನ
ಮುಗುದೆಯ ಕಂಚುಕದ ಕದಿರನ್ನ
'ಅಯ್ಯೋ ಬೆನ್ನ ಹುರಿಯಲಿ ಹರಿವ

ತಳ್ಳಂಕವನ್ನೊಮ್ಮೆ ನೇವರಿಸೋ ನೇವರಿಸೋ'
ಬರಲಿದ್ದು ಯಾವ ಗೂಡಿನ ಹಕ್ಕಿ ?
ಸಿಡಿಯುತ್ತಲೇ ಇವೇ ಪಟಾಕಿ.
"ತೊಟ್ಟಿತುಂಬ ಎಂಜಲೆಲೆ ಕಂಡ ಖುಷಿಯಲ್ಲಿಳಿದೆ
ಎಷ್ಟು ಹಸುಳೆಗಳ ಕಟವಾಯು ಜೊಲ್ಲುಪಸೆ
ಆರಿಸಿದವೋ ಸುಟ್ಟು ಕಾಗದಗಳು ?"

ನನ್ನ ಒರಟು ಪಾದದ ಕೆಳಗೆ
ಮುಂಗೈಚಾಚಿ ನನ್ನವ ಕರೆದ
'ಬಾರೆ ಇಲ್ಲಿ ಹೆಜ್ಜೆ ಇಡೆ
ಇನ್ನು ನಡಗುವದಿಲ್ಲವೇ ನಿನ್ನ ನೆಲ'
ನರ ನರಗಳೊಳಗೆ ಹೊಸ ಕಸುವ
ಬಿತ್ತುವ ಕಸಬುಗಾರ.
ತುಂಬಿಕೊಂಡವಳು
ತಲೆಬಾಗಿಲನು ತೆರೆದೆ.

ಎಂಥ ನೀಲಿ !
ಚಂದ್ರನಿರಲಿಲ್ಲ ಚುಕ್ಕಿಯಿರಲಿಲ್ಲ
'ಮೋಡಗಳ ಬಸಿರಲ್ಲಿ ಬೆಳಕು ಅಡಗಿತ್ತು'
ನನಗೆ ಗೊತ್ತು
ಆ ಬೆಳಕಿನೊಳಗಡೆ ಸುಡುವ ಬಿಸಿಲಿದೆ
ಬಿಸಿಲ ಧಗೆಯಲ್ಲೇ ಸುಳಿವ ಕಾರ್ಮೋಡವಿದೆ.
ನಾ ಕೇಳುವದು ಇಷ್ಟೇ—
ಮನುಷ್ಯರ ಮನಸ್ಸಿನಲ್ಲಿ ಪಿಚುಗುಡುವ ಕೆಸರನ್ನೊಣಗಿಸಲು
ಒಂದಿಷ್ಟು ಬಿಸಿಲ ತಾ,
ಈ ಹಾದಿ ಬೀದಿಯಲಿ ಹರಿದ ನೆತ್ತರಿನ ಕಲೆಯೊರಿಸಲು
ಒಂದಿಷ್ಟು ಮಳೆಯು ತಾ
— — — — —
ನನಗೆ ಇದೂ ಗೊತ್ತು
ನಿನ್ನೊಳಗೆಲ್ಲೋ ಸಂಪಿಗೆಯ ಮರವೊಂದು
ಕಂಪಿಸುತ್ತಿದೆ.

# ವಸಾಹತು ಶಾಹಿ ಅನುಭವದ ಹಿನ್ನೆಲೆಯಲ್ಲಿ ನಾವು ಮತ್ತು ವ್ಯಕ್ತಿತ್ವ

ಕೇಶವಶರ್ಮ ಕೆ.

ಕನ್ನಡ ವಿದ್ಯಾರ್ಥಿಯಾದ ನಾನು, ಇಂಗ್ಲೀಷ್ ವಿಭಾಗವು ನಡೆಸುತ್ತಿರುವ ಈ ಚರ್ಚೆಯಲ್ಲಿ ಭಾಗವಹಿಸುತ್ತಿದ್ದೇನೆ. ನನಗೆ ಇಂಗ್ಲೀಷ್ ಮಾತನಾಡಲು ಬರುವುದಿಲ್ಲ. ಇಂಗ್ಲೀಷನ್ನು ಬಹಳ ಕಷ್ಟ ಪಟ್ಟು ಓದಿ ಅರ್ಥಮಾಡಿಕೊಳ್ಳಲು ಪ್ರಯತ್ನಿಸುತ್ತಿರುತ್ತೇನೆ. ಹೀಗಾಗಿ ಇಂಗ್ಲೀಷ್ ಮಾತನಾಡುವವರೆದುರು ಕನ್ನಡದಲ್ಲಿ ಮಾತನಾಡಲು ಒಂದು ರೀತಿಯ ಭಯ ಮತ್ತು ಅಷ್ಟೇ ಸಂಕೋಚ. ವಿಶೇಷವೆಂದರೆ ಕನ್ನಡದ ವಿದ್ಯಾರ್ಥಿಯೊಬ್ಬ ಇಂಗ್ಲೀಷ್ ವಿಭಾಗದಲ್ಲಿ ಮಾತನಾಡುವುದು. ಏಕೆಂದರೆ ಕನ್ನಡ ಸಾಹಿತ್ಯದ ಕುರಿತು ಇಂಗ್ಲೀಷ್ ಅಧ್ಯಾಪಕರು ಮಾತನಾಡುವುದನ್ನು ಕನ್ನಡದಲ್ಲಿ ತೀರಾ ಸಹಜವೆಂಬಂತೆ ಸ್ವೀಕರಿಸಲಾಗಿದೆ. ಇದು ಕೇವಲ ಭಾಷೆಯ ಸಮಸ್ಯೆಯೆಂದು ನನಗೆ ಕಾಣುವುದಿಲ್ಲ. ಒಂದು ರೀತಿಯಿಂದ ಇದು ಭಾಷೆಯ ಜೊತೆಗೆ ಸಾಂಸ್ಕೃತಿಕ ಸಂದರ್ಭದ ವ್ಯಾಖ್ಯಾನವೂ ಆಗಿದೆಯೆಂದು ಭಾವಿಸುತ್ತೇನೆ. ಇಂಗ್ಲೀಷ್ ಎಂದರೆ ನಮಗೆ ಭಯ, ಆತಂಕ, ಮತ್ತು ಗೌರವ ಉಂಟಾಗುತ್ತದೆ. ಏಕೆ ಹೇಗೆ? ಇದರ ನಡುವೆ ನಾವೆಲ್ಲರೂ ಸೇರಿಕೊಂಡು ಅಂದರೆ ಇಂಗ್ಲಿಷ್, ಇತಿಹಾಸ, ರಾಜ್ಯಶಾಸ್ತ್ರ ಹಾಗೂ ಸಮಾಜಶಾಸ್ತ್ರದ ಅಧ್ಯಾಪಕರು ಸೇರಿಕೊಂಡು 'ವಸಾಹತು ಶಾಹಿ' ಅನುಭವದ ಹಿನ್ನೆಲೆಯಲ್ಲಿ ನಾವು ನಮ್ಮ ವ್ಯಕ್ತಿತ್ವ ಎಂದು ನಮ್ಮ ವ್ಯಕ್ತಿತ್ವವನ್ನು ಸೆಮಿನಾರ್ ಹಾಲಿನಲ್ಲಿ ಕುಳಿತು ಹುಡುಕುತ್ತಿದ್ದೇವೆ. ವಸಾಹತುಶಾಹಿ ಅನುಭವದ ಹಿನ್ನೆಲೆಯಲ್ಲಿ ನಾವು ಮತ್ತು ನಮ್ಮ ವ್ಯಕ್ತಿತ್ವ ಎನ್ನುವುದು ನಮಗೆ ದೊಡ್ಡ ಸಮಸ್ಯೆಯಾಗಿ ಕಾಣುತ್ತಿದೆ. ಈ ಯುನಿವರ್ಸಿಟಿ

ಬಿಟ್ಟು ಕೆಳಗಡೆ ಶಂಕರಘಟ್ಟ ಹಳ್ಳಿಯ ಬೀದಿ ಬದಿಯಲ್ಲಿ ಹೋಗಿ ನಿಂತರೆ ಅಲ್ಲಿಯ ಜನರು ಈ ಸಮಸ್ಯೆಯ ಬಗ್ಗೆ ಮಾತನಾಡುವುದಿಲ್ಲ. ಅವರು ಗೊಬ್ಬರ ಬೆಲೆ ಏರಿಕೆಯಾದುದರ ಬಗ್ಗೆ ಮಾತನಾಡುತ್ತಾರೆ. ನಾವು ಭಾವಿಸಿಕೊಳ್ಳುತ್ತಿರುವ ಸಮಸ್ಯೆಗಿಂತ ಅವರು ಅನುಭವಿಸುತ್ತಿರುವ ಸಮಸ್ಯೆ ದೊಡ್ಡದು ಎಂದು ಮೇಲ್ನೋಟಕ್ಕೆ ಅನಿಸುತ್ತದೆ.

ಬಹಳ ಹಿಂದೆ ಮುಳಿಯ ತಿಮ್ಮಪ್ಪಯ್ಯನವರು 'ಮಾರ್ಗದ ಎದುರಿನಲ್ಲಿ ದೇಸಿಯು ಸಂಕೋಚದಿಂದ ಮುದುಡಿಕೊಳ್ಳುತ್ತದೆ. ವಿನಯದಿಂದ ತಲೆ ಬಾಗುತ್ತದೆ. ಎಂದು ಹೇಳಿದರು. ಇಲ್ಲಿ ಯುನಿವರ್ಸಿಟಿಯಾದ ಮೇಲೆ ಜನ ಮುಂದುಡಿದ್ದಾರೆಯೇ? ಅಥವಾ ಈ ಪ್ರಶ್ನೆಯನ್ನು ಬೇರೊಂದು ರೀತಿಯಲ್ಲಿ ಕೇಳಬೇಕಾದರೆ ಶಂಕರಘಟ್ಟ ವನ್ನು ನಮ್ಮ ಅಗತ್ಯಕ್ಕೆ ತಕ್ಕಹಾಗೆ ಬಳಸಿಕೊಳ್ಳುತ್ತಿದ್ದೇವೆಯೇ ? ಚರ್ಚೆಯ ಅಗತ್ಯಕ್ಕೆ ಪೂರಕವಾಗಿ ಈ ಕೆಲವು ಪ್ರಶ್ನೆಗಳನ್ನು ಕೇಳುತ್ತಿದ್ದೇನೆ. ನಾವು ನಿಜ ವಾಗಿಯೂ ಎಲ್ಲಿದ್ದೇವೆ ? ಈ ಹೊತ್ತಿನಲ್ಲಿ ನಾವು ಚರ್ಚೆಗೆ ಆಯ್ದುಕೊಂಡ ವಿಷಯವನ್ನೆ ನೋಡೋಣ. ಈ ವಿಷಯಕ್ಕೆ ಸಂಬಂಧಿಸಿದಂತೆ ಮೂರು ಸಂಗತಿ ಗಳು ಇಲ್ಲಿವೆ. ಮೊದಲನೆಯದು ವಸಾಹತುಶಾಹಿ ಅನುಭವ ಮತ್ತು ಅದರ ಹಿನ್ನೆಲೆ. ಬ್ರಿಟೀಷ್ ರಾಜಸತ್ತೆಯು ನಮ್ಮ ಅನುಭವ ವಿನ್ಯಾಸದ ಮೇಲೆ ಬೀರಿದ ಪ್ರಭಾವದ ಕುರಿತ ಕಲ್ಪನೆ ಇಲ್ಲಿದೆ. ಇದನ್ನು ಹಿನ್ನೆಲೆಯಲ್ಲಿ ಇಟ್ಟುಕೊಂಡಾಗ ಇದುವೇ ಒಂದು ಮಾನದಂಡವಾಗುತ್ತದೆ. ಆದರೆ ನಾವೀಗ ನೇರ ರಾಜಕಾರಣದ ಹಿಡಿತದಿಂದ ಪರೋಕ್ಷ ರಾಜಕಾರಣದ ಹಿಡಿತದ ಕಡೆಗೆ ಬಂದು ತಲುಪಿದ್ದೇವೆ. ವಿವರಿ ಸಬೇಕೆಂದರೆ ಬ್ರಿಟೀಷರು ನೇರವಾಗಿ ನಮ್ಮನ್ನು ಹಿಡಿತದಲ್ಲಿ ಇಟ್ಟುಕೊಂಡಿದ್ದರು. ಅವರು ಹೋಗಿ ಆಯ್ತಲ್ಲಾ, ಈಗ ನಾವು ಐ. ಎಂ. ಎಫ್ ಸಾಲದ ಕಡೆಗೆ ಬಂದಿದ್ದೇವೆ. ಬ್ರಿಟೀಷ್ ರಾಜಸತ್ತೆಯು ನಮ್ಮನ್ನು ಒಂದು ರೀತಿಯಿಂದ ಒತ್ತಾಯಿಸುತ್ತಿದ್ದರೆ ಐ. ಎಂ. ಎಫ್ ನಮ್ಮನ್ನು ಬೇರೊಂದು ರೀತಿಯಲ್ಲಿ ಒತ್ತಾಯಿಸುತ್ತಿದೆ. ಬ್ರಿಟೀಷ್ ರಾಜಸತ್ತೆಯು ಆಳಿದ ರೀತಿಯು ನೇರ ರಾಜಕಾರಣದ ಹಿಡಿತವನ್ನು ಸೂಚಿಸು ತ್ತಿದ್ದರೆ, ಐ. ಎಂ. ಎಫ್ ಪರೋಕ್ಷ ರಾಜಕಾರಣವನ್ನು ಸೂಚಿಸುತ್ತದೆ. ನಾನು ಬ್ರಿಟೀಷರು ಹೋದ ಮೇಲೆ ಹುಟ್ಟಿದೆ. ಹೀಗಾಗಿ ನನಗೆ ಬ್ರಿಟೀಷರು ನಮ್ಮಲ್ಲಿ ಹೇಗಿದ್ದರು ಎಂದು ಗೊತ್ತಿಲ್ಲ. ಅವರು ಇಲ್ಲಿಂದ ಬಿಟ್ಟು ಹೋಗುವಾಗ ಇಲ್ಲಿ ಉಳಿಸಿದ ಕೆಲವು ಪಳೆಯುಳಿಕೆಗಳು ನನಗೆ ಗೊತ್ತಾಗುತ್ತದೆ ಅಷ್ಟೆ ! ಆದರೆ ಐ ಎಂ. ಎಫ್. ಸಾಲದ ದೆಸೆಯಿಂದ ಉಂಟಾಗಿರುವ ಬಿಕ್ಕಟ್ಟು ನನಗೆ ಬೇರೊಂದು ರೀತಿಯ ಅನುಭವವನ್ನು ಕೊಡುತ್ತದೆ. ಈ ಏರ್‍ರಾಬಿರ್‍ರಿಯಾಗಿ ಏರುತ್ತಿರುವ ಬೆಲೆಯಿಂದಾಗಿ ನಾವು ಯಾವುದನ್ನು ಎಷ್ಟು ತಿನ್ನಬೇಕೆಂಬುದನ್ನು ಲೆಕ್ಕ ಹಾಕಲು ಶುರುಮಾಡಿದ್ದೇವೆ.

ಹೆಚ್ಚು ಬೆಲೆಯ ಮೈಸೂರ್ ಸ್ಯಾಂಡಲ್ ಸೋಪ್‌ಗಿಂತ ಕಡಿಮೆ ಬೆಲೆಯ ಲೈಫ್ ಬಾಯ್ ಸೋಪ್ ಈಗ ನನಗೆ ಆತ್ಮೀಯವಾಗತೊಡಗಿದೆ. ಇರಲಿ. ಈಗ, ಆಗ ಹೇಳಿದ ಮೇಲಿನ ವಿಷಯದ ಕಡೆಗೆ ಬರುತ್ತೇನೆ. ನಾವು ವಸಾಹತುಶಾಹಿ ಅನುಭವದ ಕುರಿತು ಮಾತನಾಡುತ್ತಿದ್ದೇವೆ. ವಸಾಹತುಶಾಹಿ ಅನುಭವವೆನ್ನುವುದು ಒಂದು ರೀತಿಯ ಸಂವಾದವನ್ನು ಸೂಚಿಸುತ್ತದೆ. ಅಂದರೆ ವಸಾಹತುಶಾಹಿ ಅನುಭವ ಅನ್ನುವುದು ಬಂದಿದೆ ಎಂದು ನಮ್ಮ ಮೇಲೆ ಸೇರಿದ ಅದನ್ನು ಹೇರಿದ ದೇಶ ಮತ್ತು ವಸಾಹತು ಶಾಹಿ ಅನುಭವಕ್ಕೆ ಒಳಗಾದ ದೇಶಗಳ ನಡುವಣ ಸಂವಾದವನ್ನು ಈ ಪರಿಕಲ್ಪನೆಯು ಸೂಚಿಸುತ್ತದೆ. ಈ ಪರಿಕಲ್ಪನೆಯಲ್ಲಿ ಮೂರ್ತ ಮತ್ತು ಅಮೂರ್ತವಾಗಿ ಸಂಬಂಧಗಳಿರುತ್ತವೆ. ಮೂರ್ತ ರೂಪದ ಪ್ರಶ್ನೆಯು ಬಂದಾಗ ಅದನ್ನು ದೃಶ್ಯ ಚೌಕಟ್ಟಿನ ಹಿನ್ನೆಲೆಯಲ್ಲಿ ಅರ್ಥಮಾಡಿಕೊಳ್ಳಲು ಪ್ರಯತ್ನಿಸುತ್ತೇವೆ ಬ್ರಿಟೀಷರು ಇಲ್ಲಿ ನಮ್ಮನ್ನು ನೇರವಾಗಿ ಆಳುತ್ತಿದ್ದುದು ಈ ರೀತಿಯ ದೃಶ್ಯ ಸಂಗತಿಗೆ ಒಳಗೊಂಡಿದೆ. ಆದರೆ ಅವರು ಇಲ್ಲಿ ಇದ್ದಾಗ ಮತ್ತು ಹೋದ ಮೇಲೆ ಉಂಟಾದ ಸಾಂಸ್ಕೃತಿಕ ಪರಿಕಲ್ಪನೆಗಳು ಎಲ್ಲವೂ ದೃಶ್ಯದ ಚೌಕಟ್ಟಿಗೆ ಒಳಪಡದೇ ಅದೃಶ್ಯದ ಚೌಕಟ್ಟಿಗೆ ಒಳಪಡುತ್ತದೆ. ದೃಶ್ಯರೂಪದಲ್ಲಿ ಇರುವುದನ್ನು ನಾವು ವಿರೋಧಿಸುವುದು ಸುಲಭ. ಆದರೆ, ಅದೃಶ್ಯ ರೂಪದಲ್ಲಿರುವುದನ್ನು ವಿರೋಧಿಸುವುದು ಕಷ್ಟ. ಏಕೆಂದರೆ ಎಲ್ಲಿ ಹೊಡೀಬೇಕೆಂದು ತಿಳಿಯುವುದಿಲ್ಲ.

ಈ ವಿಷಯಕ್ಕೆ ಸಂಬಂಧಿಸಿದಂತೆ ಮತ್ತೊಂದು ಸಂಗತಿಯಿರುವುದು 'ನಾವು' ಎನ್ನುವ ಪದದಲ್ಲಿ. ಈ 'ನಾವು' ಅಂದುಕೊಳ್ಳುವವರು ಎಲ್ಲಿದ್ದೇವೆ ಎನ್ನುವುದು ನನ್ನ ಮುಂದಿರುವ ಪ್ರಶ್ನೆ. 'ನಾವು' ಎಂದರೆ ಸಮಾಜದ ಪ್ರಾತಿನಿಧಿಕ ವ್ಯಕ್ತಿಗಳೇ ? ಕಾರ್ಮಿಕರೇ ? ಅಥವಾ ಸೆಮಿನಾರ್‌ಹಾಲ್‌ನಲ್ಲಿ ತಣ್ಣಗೆ ಕುಳಿತು ತಲೆ ಬಿಸಿಮಾಡಿಕೊಳ್ಳುವ ಮಂದಿಯೋ ? ಎಲ್ಲರನ್ನು ಸೇರಿಸಿಕೊಂಡು 'ನಾವು' ಎಂದು ಮಾತನಾಡುವುದೂ ಕಷ್ಟ. ನಾವು ಇಲ್ಲಿ ಕುಳಿತು 'ವಸಾಹತುಶಾಹಿ ಅನುಭವ' ಹಾಗೇ ಹೀಗೆ ಎಂದು ಮಾತನಾಡಿದರೆ, ಶಂಕರಘಟ್ಟದ ಹಳ್ಳಿಯ ಜನ ಗೊಬ್ಬರದ ಬೆಲೆಯೇರಿಕೆಯ ಬಗೆಗೆ ತಲೆ ಕೆಡಿಸಿಕೊಳ್ಳುತ್ತಾರೆ.

ನಮ್ಮ ಮುಂದಿರುವ ಮತ್ತೊಂದು ಸಂಗತಿ 'ನಮ್ಮ ವ್ಯಕ್ತಿತ್ವ'. ನಮ್ಮ ವ್ಯಕ್ತಿತ್ವ ಎನ್ನುವುದು ಬೇರೆಯೇ ಆದ ಒಂದು ಸಂಗತಿಯೇ ? ಈ ಮೂರು ಸಂಗತಿಗಳು ಕೂಡ ಪರಸ್ಪರ ಬೆರೆತುಕೊಂಡಿವೆ. ಅದನ್ನು ಪರಸ್ಪರ ಬೇರ್ಪಡಿಸಲಾಗದ ಸ್ಥಿತಿಯಲ್ಲಿ ಹೆಣೆದುಕೊಂಡಿದೆ.

ನಾನು ನನ್ನ ಮಾತುಗಳನ್ನು ಹೇಳಲು ಒಂದು ಕ್ಷಣಕ್ಕೆ ಅಚಾರಿತ್ರಿಕ ವಿಧಾನವನ್ನು ಆಶ್ರಯಿಸುತ್ತೇನೆ. ಅಚಾರಿತ್ರಿಕವಾಗಿ ಹೇಳುವುದಿದ್ದರೆ 'ಅದೃಶ್ಯ'ವಾಗಿ ನಮ್ಮನ್ನು ವ್ಯಾಪಿಸಿಕೊಂಡ 'ಪೂರ್ವ', 'ಪಶ್ಚಿಮ' ಮೌಲ್ಯಗಳು ನಮಗೆ ಸಮನಾಗಿಯೇ ಕಂಡಿವೆ.

ನಮ್ಮಲ್ಲಿ ವಸಾಹತುಶಾಹೀ ಅನುಭವದ ಜೊತೆಗೆ ಆಧುನಿಕತೆಯ ಬಗೆಗೆ ಕೂಡ ಮಾತನಾಡುತ್ತಾ ಬಂದಿದ್ದೇವೆ. ವಸಾಹತುಶಾಹೀ ಅನುಭವ ಮತ್ತು ಆಧುನಿಕತೆಯ ಪರಿಕಲ್ಪನೆಗಳು ಒಂದಲ್ಲ ಆದರೆ, ನಮ್ಮ ಸಮಸ್ಯೆಯನ್ನು ಆಧುನಿಕತೆಯ ವಿಕೃತಿಯ ಫಲವೆನ್ನಬೇಕೇ? ಅಥವಾ ಈ ಎಲ್ಲಾ ಸಮಸ್ಯೆಗಳು ವಸಾಹತುಶಾಹಿ ಅನುಭವದ ದ್ಯೋತಕವೆಂದು ಕರೆಯಬೇಕೇ? ಇಪ್ಪತ್ತೊಂದನೆಯ ಶತಮಾನದ ಜಗತ್ತಿಗೆ ಹಾರುವ ತರಾತುರಿಯಲ್ಲಿ ಉಂಟಾದ ಕೆಲವು ವಿಕೃತಿಯಲ್ಲಿ ನಾವು 'unrest' ನ್ನು ಅನುಭವಿಸುತ್ತಿದ್ದೇವೆ. ಈ unrest ಗೆ ಬ್ರಿಟೀಷರು ಕಾರಣವೆಂದು ಹಿಡಿಶಾಪ ಹಾಕುತ್ತಾ ಕುಳಿತರೆ ನಾವು ಏನು ಮಾಡಿದ ಹಾಗಾಯಿತು? ಹೀಗೆ ಕೇಳುವಾಗಲೂ ಆಧುನಿಕತೆಯು ಬರಿಯ ಕೇಡನ್ನು ಮಾತ್ರ ಸೃಷ್ಟಿಸುತ್ತದೆ ಎಂದು ಹೇಳುತ್ತಿಲ್ಲ. ಕೆಲವು ವೈರುಧ್ಯಗಳ ನಡುವೆ ಬದುಕುತ್ತಿದ್ದೇವೆ ಎಂದಷ್ಟೇ ಅರ್ಥ.

ಇಲ್ಲಿ ನನ್ನ ಮುಖ್ಯ ಗಮನವಿರುವುದು—ವಸಾಹತುಶಾಹಿ ಅನುಭವವೆನ್ನುವುದು ನಮ್ಮ ಅಂತರಂಗವನ್ನು ಪ್ರವೇಶಿಸಿದೆ. ಈಗ ವಸಾಹತುಶಾಹಿ ಅನುಭವದ ಬಗೆಗೆ ಮಾತನಾಡುವಾಗ ಸ್ವಲ್ಪ ತಪ್ಪಿದರೂ ಒಂದು ರೀತಿಯಲ್ಲಿ Behaviourstic approach ಆಗುವ ಸಂಭಾವ್ಯತೆಯೂ ಇದೆ.

ಬ್ರಿಟೀಷ್ ಅಧಿಕಾರದ ಜೊತೆಗಿನ ಸಂವಾದವೆಂದರೆ ಅಧಿಕಾರದ ಜೊತೆಗಿನ ಸಂವಾದ, ಅಧಿಕಾರದ ಜೊತೆಗೆ ಸಂವಾದವೆಂದರೆ ನಮಗೆ ಒಂದು ನೈತಿಕ ತೀರ್ಮಾನ ಮಾತ್ರ. ಈ ನೈತಿಕ ತೀರ್ಮಾನಗಳು ನಮ್ಮ ಮನಸ್ಸಿನ ಒಳಗಡೆಗೆ ಇರುವುದರಿಂದ ನಾವು ಒಂದು ಸಾಂಸ್ಕೃತಿಕ ಸನ್ನಿವೇಶವನ್ನು ಕಲ್ಪಿಸಿಕೊಂಡು 'ನಿಜವಾದ ಸ್ವಾತಂತ್ರ್ಯ' ಮತ್ತು 'ನಿಜವಾದ ನ್ಯಾಯ' ಎನ್ನುವ ಅರ್ಥದಲ್ಲಿ ಮಾತನಾಡುತ್ತಿದ್ದೇವೆ. ಲಂಡನ್‌ನಿಂದ ನ್ಯೂಯಾರ್ಕನ ಕಡೆಗೆ ಜಗಿದ ಈ ಸಾಂಸ್ಕೃತಿಕ ಸನ್ನಿವೇಶದಲ್ಲಿ ಎಷ್ಟೊಂದು ಮಿಶ್ರಣಗಳಿವೆ? ಹೀಗಾಗಿ ವಸಾಹತುಶಾಹಿ ಅನುಭವವೆನ್ನುವುದನ್ನು ಒಂದು ರೀತಿಯಲ್ಲಿ ಬುದ್ಧಿಜೀವಿ ವೈಚಾರಿಕ ಚೌಕಟ್ಟು (Intellectual Framework) ಮಾಡಿಕೊಂಡು ಯೋಚಿಸುತ್ತಿದ್ದೇವೆ. ಆದರೆ ಈ ಬುದ್ಧಿಜೀವಿ ವೈಚಾರಿಕ ಚೌಕಟ್ಟು ಮಾಡಿಕೊಂಡಾಗ ನಾವು ಇನ್ನಿತರ ವಿಷಯಗಳ ಬಗೆಗೆ ಯೋಚಿಸಲು ಹೋಗುವುದಿಲ್ಲ. ಆದರೆ ನಿಜವಾದ ವಿಷಯವೆಂದರೆ ಚರಿತ್ರೆಯಲ್ಲಿ ಆಗಿ ಹೋಗಿರುವ ಈ ವಸಾಹತು

ಶಾಹಿ ಅನುಭವದ ಬಗೆಗೆ ನಾವು ಭಾವನಾತ್ಮಕವಾಗಿ ಮಾತನಾಡಲು ಪ್ರಾರಂಭಿಸಿದರೆ ಪೂರ್ವ-ಪಶ್ಚಿಮ ಎಂದು ವಿಭಜನೆಯಾಗುತ್ತದೆ. ಈ ಭಾವನಾತ್ಮಕ ಪ್ರತಿಕ್ರಿಯೆಯು ಗೈರುಹಾಜರಿಯಾದರೆ ಈ ಪ್ರಕ್ರಿಯೆಯನ್ನು ಸ್ವಯಂ ಪೂರ್ಣವೆನ್ನುವಂತಿಲ್ಲ.

ಮತ್ತೊಂದು ಯೋಚನಾಕ್ರಮವನ್ನು ಇಲ್ಲಿಡಬೇಕೆಂದರೆ ವಸಾಹತುಶಾಹಿ ಅನುಭವವು ಸಾಂಸ್ಕೃತಿಕ ವಿದ್ಯುತ್ ಸಂಚಾರವನ್ನು ಕೊಟ್ಟಿದೆ. ಹೀಗಾಗಿ ಈಗ ಇದರ ಬಗೆಗೆ ನಾವು ಆಡುವ ಮಾತೆಲ್ಲವೂ ಸಾಂಸ್ಕೃತಿಕ ವಿದ್ಯುತ್ ಸಂಚಾರದ ವಿರುದ್ಧ ಮಾಡುತ್ತಿರುವ ಪ್ರತಿಕ್ರಿಯೆಯ ರೂಪವನ್ನು ಪಡೆದುಕೊಳ್ಳುತ್ತದೆ. ವಸಾಹತುಶಾಹಿ ಅನುಭವವು ಭಾಷೆಯಿಂದ ಹಿಡಿದು ಪ್ರತಿಯೊಂದು ಅಂಶಗಳ ಕಡೆಗೂ ನಮ್ಮನ್ನು ಕರೆದೊಯ್ದಿದೆ. ಇದರ ಮಧ್ಯೆ 'ಲಿಖಿತರೂಪ ಸಾಹಿತ್ಯ' (written text) ಮತ್ತು ದೇಸೀಯ ಮಾತುಗಳ ನಡುವಣ ಸಂಬಂಧವನ್ನು ಅವುಗಳ ಅಂತರ ಪ್ರತಿಕ್ರಿಯೆಯನ್ನು (Interaction) ಕಳೆದುಕೊಂಡಿದ್ದೇವೆ. ದೇಸೀಯ ದಿವ್ಯವಾದುದು ಎಂದು ಒಂದು ವರ್ಗ ಪ್ರತಿಪಾದಿಸುತ್ತಿದ್ದರೆ, ಲಿಖಿತ ಪಠ್ಯಗಳ ಜೊತೆಗೆ ಜಗಳಾಡುವವರು ಮತ್ತೊಂದು ಕಡೆಗಿದ್ದಾರೆ. ಇವುಗಳ ನಡುವಣ ಅಂತರ ಪ್ರತಿಕ್ರಿಯೆಯ ಕಡೆಗೆ ನಾವು ಯೋಚಿಸಬೇಡವೇ ? ಎಲ್ಲವನ್ನು ವಿಭಜಿಸಿ ನೋಡುವ ಕ್ರಮ ನಮಗೆ ಯಾರಿಂದ ಬಂತು ? ಬ್ರಿಟೀಷರ ಬಳುವಳಿಯಲ್ಲಿ ಇದೂ ಒಂದು. ಸಾಂಸ್ಕೃತಿಕ ಸಮವಿರಸದಲ್ಲಿ ನಾವು ಬೇರೆ ಬೇರೆ ರೀತಿಯ ಹುಡುಕಾಟಗಳ ಕಡೆಗೆ ಈಗ ಹೊರಟಿದ್ದೇವೆ. ನಮ್ಮ ಸಮಸ್ಯೆ ಮತ್ತೊಂದು ಮೂಲದ ಕಡೆ ನೋಡುತ್ತೇವೆ.

ಈಗ 'ಪರ್ಯಾಯ ಸಂಸ್ಕೃತಿ' 'ಪರ್ಯಾಯ ಪರಿಭಾಷೆ' ಗಳ ಬಗೆಗೆ ಮಾತನಾಡುತ್ತೇವೆ. ಈ ಪರಿಭಾಷೆ ಕೂಡ ಈ ನೆಲದ ಗುಣವನ್ನು ಹಿಡಿಯುವ ಪ್ರಯತ್ನವಾಗಿದೆ. ಪರ್ಯಾಯದ ಪರಿಭಾಷೆ ಕೇವಲ ದೇಸಿಯಲ್ಲ ! ಪರಿಪೂರ್ಣವಾದ ಅರ್ಥದಲ್ಲಿ 'ದೇಸೀ' ಎಂಬುದು ಇಲ್ಲ. ಪರ್ಯಾಯ ಸಂಸ್ಕೃತಿಯ ಕಲ್ಪನೆಯು ಇಲ್ಲಿಯ ದೇಸಿಯ ಮೂಲದಿಂದ ಹೊರಡಬೇಕೆಂದು ಹೇಳುತ್ತದೆ. ಅಂದರೆ ದೇಸೀಗೆ ಇರಬಹುದಾದ ವಿವಿಧ ಮುಖಗಳನ್ನು ಹುಡುಕುತ್ತದೆ. ವಿಶಾಲವಾದ ಅರ್ಥದಲ್ಲಿ ದೇಸಿಯ ಚೌಕಟ್ಟಿಗೆ ಆಳುವ ವರ್ಗದ ಸಂಸ್ಕೃತಿಯ ವಿರುದ್ಧ ನಿಲ್ಲುವ ಧ್ವನಿಯಿದೆ. ಹೀಗೆಂದುಕೊಂಡು ಪರ್ಯಾಯ ಸಂಸ್ಕೃತಿಯ ಪರಿಕಲ್ಪನೆಯು ಸಂವಾದ ರಾಹಿತ್ಯ ಸ್ಥಿತಿಗೆ ಇಳಿದರೆ ಯಾವ ಪ್ರಯೋಜನವೂ ಇಲ್ಲ. ಒಂದರ್ಥದಲ್ಲಿ ಅದೂ ಕೂಡ ಪ್ರತ್ಯೇಕ ತರಗತಿಯ ಅಪಾಯವನ್ನು ಎದುರಿಸಬಹುದು. ಪರ್ಯಾಯ ಸಂಸ್ಕೃತಿಯ ಪರಿಕಲ್ಪನೆಯೂ ಒಂದು ಮಾದರಿಯಾಗುತ್ತಿದೆಯೇ ವಿನಃ ಮತ್ತೇನು ಇಲ್ಲ. ನಾವೆಲ್ಲಾ ಈ ರೀತಿಯಲ್ಲಿ ಆದರ್ಶ ಮಾದರಿಯ ಹುಡುಕಾಟದಲ್ಲಿದ್ದೇವೆ. ಆದರೆ ಆದರ್ಶ ಮಾದರಿಯೆಂಬುದೇ ಚರ್ಚಾರ್ಹವಾದ ಸಂಗತಿಯಾಗಿದೆ. ಆದರ್ಶ ಮಾದರಿಯು ಪ್ರಾಯೋಗಿಕ ಕ್ಷಣಗಳನ್ನು ಆಧಾರಿಸಿಕೊಂಡಿರುತ್ತದೆ. 'ಆದರ್ಶ ಮಾದರಿ' ಯದೇ ಒಂದು ಸಮಸ್ಯೆ. ಇರಲಿ.

ವಸಾಹತುಶಾಹಿ ಅನುಭವ ಕುರಿತಂತೆ ಮಾತಾಡುವಾಗ ಕೆಲವು ಸಿದ್ಧಾಂತಗಳು ನಮ್ಮ ಮನಸ್ಸಿನೊಳಗೆ ಬೇರುಬಿಟ್ಟಿರುತ್ತವೆ. ಇವುಗಳ ಕುರಿತಂತೆ ವಿನಯ ಕೃಪಾಲ್ ರವರು ಕೆಲವು ಸಂಗತಿಗಳನ್ನು ಹೇಳಿದ್ದಾರೆ. ಅದನ್ನೆ ಮತ್ತೊಮ್ಮೆ ಇಲ್ಲಿ ಉಲ್ಲೇಖಿಸುತ್ತಿದ್ದೇನೆ. (Vinaykripal 1989 P 14).

ವಸಾಹತು ಶಾಹೀ ಅನುಭವದ ಸಿದ್ಧಾಂತದಲ್ಲಿ ಮುಖ್ಯ ಮುಖಗಳು ಹೀಗಿದೆ.

೧) ಆರ್ಥಿಕ ದೃಷ್ಟಿಕೋನ ಸಿದ್ಧಾಂತ ೨) ನೈತಿಕ ದೃಷ್ಟಿಕೋನದ ಸಿದ್ಧಾಂತ
೩) ಅನುಕ್ರಮದ ಸಿದ್ಧಾಂತದ ಹಿನ್ನೆಲೆಯ ದೃಷ್ಟಿಕೋನ.

ವಸಾಹತು ಕಾಲಘಟ್ಟದಲ್ಲಿ ಪಾರಂಪರಿಕವಾದ ಭಾರತೀಯ ಸಮಾಜದಲ್ಲಿ ಹೊಸದೊಂದು ಪರಿವರ್ತನೆ ಕಾಣಿಸಿಕೊಂಡಿತು. ಬ್ರಿಟೀಷರು ಬಂದ ಮೇಲೆ ಪ್ರಾರಂಭಿಸಿದ ರೇಲ್ವೆ. ಮುದ್ರಣ ಯಂತ್ರಗಳು, ಶಾಲೆ ಇತ್ಯಾದಿಗಳ ದೆಸೆಯಿಂದ ಸಹಜವಾಗಿ ಸಮಾಜಿಕತೆಯಲ್ಲಿ ಶಕ್ತಿ ಮತ್ತು ಸ್ಥಾನಿಕ ಪ್ರತೀಕ ಬಂತು. ಅಂದರೆ ಎತ್ತಿನ ಗಾಡಿಯ ಬದಲಿಗೆ ಬಂದ ರೇಲ್ವೇ, ಲಿಪಿಕಾರರ ಬದಲಿಗೆ ಬಂದ ಮುದ್ರಣಯಂತ್ರ, ಮಠದ ಬದಲಿಗೆ ಬಂದ ಮಿಶಿನರೀ ಶಾಲೆಗಳು ಸಾಮಾಜಿಕವಾಗಿ ಶಕ್ತಿಯುತವಾದವು. ಶಾಲೆಗೆ ಹೋಗುವವರು ಹೆಚ್ಚು ತಿಳಿದವರು ಎಂಬ ಕಲ್ಪನೆ ಮೂಡಿಬಂತು.

ಆಳುವವರೇ ಒಡೆಯರು ಅವರಿಗೆ ಋಣಿಯರಾಗಿರಬೇಕೆಂಬ ನೈತಿಕ ದೃಷ್ಟಿಕೋನದ ದೆಸೆಯಿಂದ ಇಂಗ್ಲೀಷರನ್ನು ಹೊಗಳುವ ಕೈಂಕರ್ಯವನ್ನು ಅನೇಕರು ಮಾಡತೊಡಗಿದ್ದು ಗಮನಾರ್ಹ. ಈ ಸಂದರ್ಭದಲ್ಲಿಯೇ ಯುರೋಪಿನ ಸಂಸ್ಕೃತಿಯ ಜೊತೆಗೆ ಒಪ್ಪಂದ ಮಾಡಿಕೊಳ್ಳುವ ಪ್ರವೃತ್ತಿಯು ಒಂದೆಡೆಗೆ ಕಾಣಿಸಿಕೊಂಡಿದ್ದರೆ, ಇನ್ನೊಂದೆಡೆಗೆ ಅದನ್ನು ವಿರೋಧಿಸುವವರೂ ದೇಶೀಯ ಮೌಲ್ಯದ ಹುಡುಕಾಟಕ್ಕೆ ತೊಡಗಿದರು.

ಭಾರತೀಯ ದೇಶಿಯತೆಗೆ ಮಹತ್ವವನ್ನು ಕೊಟ್ಟ ಗಾಂಧೀ ಸಮಾಜಿಕತೆಯನ್ನು, ರಾಜಕಾರಣವನ್ನು, ವಿದ್ಯಾಭ್ಯಾಸವನ್ನು ಚರಿತ್ರೆಯ ಆಧಾರದಲ್ಲಿ ಕಂಡುಕೊಳ್ಳುತ್ತಾರೆ. ವಸಾಹತುಶಾಹೀ ಅನುಭವದ ನೇರ ತೆಕ್ಕೆಗೆ ಬಗ್ಗಿಕೊಂಡಿರುವ ಕರ್ನಾಟಕದ ಸಾಹಿತ್ಯ ವಲಯವು ವಿಕಾಸವನ್ನು ಭೇದಿಸಿಕೊಂಡು ಹುಟ್ಟಿಕೊಂಡಿದ್ದರಿಂದ ಸಹಜವಾಗಿ ಮಾಮೂಲೀ ಉಪಕ್ರಮವು ತಪ್ಪಿಹೋಗಿದೆ. ಮೂರನೇ ಜಗತ್ತಿನ ಒಟ್ಟು

ಸಾಮಾಜಿಕ ಪರಿವರ್ತನೆಯನ್ನು ಆರ್ಥಿಕ ಸಿದ್ಧಾಂತ ನೈತಿಕ ಸಿದ್ಧಾಂತ, ಅನುಕ್ರಮದ ಸಿದ್ಧಾಂತಗಳ ಮೂಲಕ ಪರಿಶೋಧಿಸುವ ವಿನಯ ಕೃಪಾಲ್ ಕೆಲವು ಮುಖ್ಯವಾದ ಕಾರಣಗಳನ್ನು ಕೊಡುತ್ತಾರೆ.

ಅಧಿಕಾರ ಮತ್ತು ಸ್ಥಾನದ ಆಸಕ್ತಿಯಿಂದ ವಸಾಹತು ಅನುಭವಕ್ಕೆ ಬಾಗಿಕೊಂಡ ದೇಶದಲ್ಲಿ ಈಗ ಭಾರೀ ಮಟ್ಟದ ಕೈಗಾರಿಕೆಗಳು ನಿರ್ಮಾಣವಾಗುತ್ತಿವೆ. ಜಗತ್ತಿನಾದ್ಯಂತ ಕೈಗಾರಿಕೀಕರಣ ನಡೆಯುತ್ತಿರುವ ಈ ಹೊತ್ತಿನಲ್ಲಿ ವಸಾಹತುಶಾಹಿ ಅನುಭವಕ್ಕೆ ತೆಗೆದುಕೊಂಡ ದೇಶಗಳೂ ಕೂಡ ಕೈಗಾರಿಕೀಕರಣದ ಕಡೆಗೆ ತಮ್ಮ ಬಲವನ್ನು ಸೂಚಿಸುತ್ತವೆ. ಆರ್ಥಿಕ ಸಾಮರಸ್ಯವೇ ಇದಕ್ಕೆ ಮೂಲ ಕಾರಣವಲ್ಲ. ಅದಕ್ಕಿಂತ ಹೆಚ್ಚಾಗಿ ಸಂರಕ್ಷಣೆಯ ಸ್ಥಾನ ಸೂಚನೆಯ ಪರಿಕಲ್ಪನೆಗಳು ಈ ರೀತಿಯ ದೇಶಗಳಲ್ಲಿ ಕಾಣಿಸಿಕೊಂಡಿವೆ. ಇದರ ಪರಿಣಾಮವಾಗಿ ಮೂರನೆಯ ಜಗತ್ತು ತನ್ನದೇ ಸ್ವಂತ ಚಹರೆಯನ್ನು ಪಡೆದುಕೊಂಡಿದೆ. ಈ ಚಹರೆ ವಿಶಾಲವಾದ ಅರ್ಥದಲ್ಲಿ ಭಾರತೀಯ ಪರಿಸರದಲ್ಲಿ ಕಾಣಿಸಿಕೊಂಡಿದ್ದರೆ, ವಿಶೇಷವಾದ ಅರ್ಥದಲ್ಲಿ ಕರ್ನಾಟಕದ ಸಾಂಸ್ಕೃತಿಕ ಸನ್ನಿವೇಶದ ಮೇಲೆ ಪ್ರಭಾವ ಬೀರಿದೆ.

ಎರಡನೆಯ ನೈತಿಕ ಸಿದ್ಧಾಂತದ ಹಿನ್ನೆಲೆಯಲ್ಲಿರುವ ಸಾಂಸ್ಕೃತಿಕ ಸ್ವರೂಪ ಮುಖ್ಯವಾಗಿ ವಸಾಹತುಶಾಹೀ ಸಂಸ್ಕೃತಿ ಬಿತ್ತಿಹೋದ ಅನೇಕ ಅಂಶಗಳನ್ನು ತಾತ್ವಿಕವಾಗಿಯೇ ವಿರೋಧಿಸಲು ನೈತಿಕ ಪ್ರಯತ್ನಬೇಕೆಂದು ತಿಳಿಯುವ ಪ್ರಯತ್ನವಿದು. ಇಂಗ್ಲೀಷ್‌ನ ಸಂಸ್ಕೃತಿಯನ್ನು ಮಹತ್ವವೆಂದು ಪರಿಭಾವಿಸುವ ಚಿಂತಕರು ಇಂಗ್ಲೀಷಿನ ಮುಖಾಂತರ ಪರ್ಯಾಯವನ್ನು ಯೋಚಿಸಿದರೆ ಇನ್ನು ಅನೇಕರು ಅದನ್ನು ಬಿಟ್ಟು ಬಿಡಲು ಪ್ರಯತ್ನಿಸುತ್ತಾರೆ. ಕೆಲವರಿಗೆ ಬ್ರಿಟೀಷ್ ರಾಜಸತ್ತೆಯು ಬಿತ್ತಿ ಹೋದ ವಿನ್ಯಾಸವೇ ಒಂದು ನೈತಿಕ ತೀರ್ಮಾನವಾಗಿ ಕಾಣಿಸುತ್ತದೆ,

ಭಾರತೀಯ ಸಂದರ್ಭದಲ್ಲಿ ಅನುಕ್ರಮತೆಯ ಕುರಿತು ಸ್ಪಷ್ಟವಾಗಿ ಪ್ರತಿಪಾದಿಸಿದ ಗಾಂಧಿ "ಹಿಂದೂ ಸ್ವರಾಜ್ಯ"ದ ಕಲ್ಪನೆಯನ್ನು ಮಂಡಿಸಿದ್ದು ಈ ಹಿನ್ನೆಲೆಯಿಂದ. ಗಾಂಧೀ ವಿಚಾರಧಾರೆಯ ಮುಖ್ಯ ನಿಲುವು ಆದರ್ಶ–ಮಾನವನ ಕಡೆಗೆ ಮುಖ ಮಾಡಿದೆ. ಭಾರತೀಯ ಚರಿತ್ರೆಯ ವಿನ್ಯಾಸವು ಆದರ್ಶ ಮನುಷ್ಯನನ್ನು ನಿರ್ಮಿಸುತ್ತದೆ. ಎಂದು ಭಾವಿಸುವ ಗಾಂಧಿ ಪಶ್ಚಿಮದ ಆಧುನಿಕ ನಾಗರೀಕತೆಯನ್ನು ನಿರಾಕರಿಸುವುದು ಗಮನಾರ್ಹ (ಕೆ. ರಾಘವೇಂದ್ರರಾವ್). ಈ ಮೂರು ಅಂಶಗಳು ಕರ್ನಾಟಕದ ಸಾಂಸ್ಕೃತಿಕ ಸನ್ನಿವೇಶವನ್ನು ಸ್ಥೂಲವಾಗಿ ವಿವರಿಸುತ್ತವೆ. ಕರ್ನಾಟಕದ ಸಾಂಸ್ಕೃತಿಕ ವಲಯದಲ್ಲಿ ಈಗಲೂ ಈ ಮೂರು ಅಂಶಗಳು ಅಂತಸ್ಥವಾಗಿವೆ. ಈ ಅಂಶಗಳನ್ನು

ಈಗಾಗಲೇ ಕನ್ನಡದ ಸಾಹಿತ್ಯ ವಲಯದಲ್ಲಿ ಬೇರೆ ಬೇರೆ ಸಂದರ್ಭಗಳಲ್ಲಿ ಚರ್ಚಿಸಲಾಗಿದೆ ಕೂಡ.

ಈ ಚರ್ಚೆಯು ಮತ್ತೊಂದು ಕಡೆಗೆ ಈಗ ನೋಡಲು ಪ್ರಯತ್ನಿಸುತ್ತಿದ್ದೇವೆ. ನಮ್ಮ ಚರ್ಚೆಯ ಬಿಂಬಗಳು ಇದರಿಂದಲೂ ರೂಪಗೊಂಡಿರಬಹುದು. ಇಲ್ಲಿಗೆ ಬ್ರಿಟೀಷರು ಬಂದು ಹೋದ ಮೇಲೆ ನಮ್ಮ ಸಮಾಜಿಕ ಸಂರಚನೆಯು ಒಟ್ಟು ಕೇಂದ್ರವೇ ಒಡೆದು ಹೋಯಿತು ತಾನೇ ? ನಮ್ಮ ಸಾಂಪ್ರದಾಯಿಕ ನಿರ್ದಿಷ್ಟ ಕೇಂದ್ರ ಆಲೋಚನಾ ಕ್ರಮವು ಒಡೆದು ಹೋದುದರ ಪರಿಣಾಮವೇ ಈಗ ನಾವು ಇಂಗ್ಲೀಷ್ ಚಿಂತನೆಗಳನ್ನು ಆಶ್ರಯಿಸಬೇಕಾಗಿರುದು ಭಾರತೀಯ ಸಮಾಜಕ್ಕೆ ಇದ್ದ ಕೇಂದ್ರ ತಪ್ಪಿ ಹೋಗಿ 'ಲಂಡನ್ ಕೇಂದ್ರ' ವಾದುದರ ಪರಿಣಾಮ ಕೇವಲ ಸಾಮಾನ್ಯವಾದುದಲ್ಲ. ಈ ಆಶ್ರಿತ ಪರಿಸ್ಥಿತಿಯ ನಾಲ್ಕು ಮುಖ್ಯ ಸಂಗತಿಗಳನ್ನು ನಮ್ಮ ಸಾಹಿತ್ಯ ಪ್ರತಿಕ್ರಿಯೆಯ ಹಿನ್ನೆಲೆಯಲ್ಲಿ ಗ್ರಹಿಸಬೇಕಾಗಿದೆ. ವಸಾಹತುಶಾಹಿ ಮನಸ್ಸಿನ ಜೊತೆಗೆ ಬಂದ ಶಾಪದಲ್ಲಿರುವ ನಾಲ್ಕು ಪ್ರಸಕ್ತಿಗಳು ಹೀಗಿವೆ. ರಾಜಕಾರಣದ ಮುಖ, ಆರ್ಥಿಕ ಮುಖ, ತಾತ್ವಿಕ ಮುಖ ಮತ್ತು ಸಾಮಾಜಿಕ ಮುಖ. ಸಾಮಾಜಿಕ ಹೊರ ರಚನೆಯನ್ನು ವ್ಯಾಪಿಸಿಕೊಳ್ಳುವ ಸಂಗತಿಗಳು ಇವು. ವಸಾಹತು ಪೂರ್ವದ ಸಮಾಜದಲ್ಲಿ ರಾಜಕೀಯ ಕೇಂದ್ರವಿದ್ದುದು ನಮ್ಮ ಪರಂಪರೆಯ ಅರಸೊತ್ತಿಗೆಯ ಕ್ರಮದಲ್ಲಿ ತಾನೇ ? ಇಲ್ಲಿಯ ರಾಜರು ಮಣ್ಣು ಮುಕ್ಕಿ ಹೋದಾಗ ಉಂಟಾದ ಮೊದಲ ಪರಿಸ್ಥಿತಿ ಎಂದರೆ ಸಾಮಾಜಿಕರಿಗೆ ಉದ್ಭವಿಸಿದ ಅಸ್ಥಿರತೆಯ ಭಯ. ಈ ಅಸ್ಥಿರತೆಯ ಭಯವೇ ಬ್ರಿಟಿಷ್ ರಾಣಿಯನ್ನು ಹೊಗಳುವಂತೆ ಮಾಡಿತು. ಈ ಕಾರಣದಿಂದಲೇ ರಾಜಕಾರಣದ ನಮೂನೆಯು ಅಲ್ಲಿಯ ಅನುಕರಣೆಯನ್ನು ಮಾಡುವಂತೆ ಪ್ರೇರೇಪಿಸಿತು. ಈಗಲೂ ಈ ಪರಿಸ್ಥಿತಿಯೇನೂ ಸುಧಾರಿಸಿಲ್ಲ. ನಮ್ಮ ಸಂವಿಧಾನದ ಸ್ವರೂಪವೇ ಬೇರೊಂದು ಅನುಕರಣೆಯಿಂದ ಹುಟ್ಟಿಕೊಂಡಿತೇನೋ ? ಬ್ರಿಟೀಷರು ಇದ್ದಾಗ ಇದ್ದ (ಮೌಖಿಕ ಸ್ವರೂಪ) ಅನೇಕ ಕಾನೂನುಗಳು ನಮ್ಮ ಸಂವಿಧಾನದಲ್ಲಿವೆ. ಜಾಗತಿಕ ರಂಗಗಳಲ್ಲಿ ನಡೆಯುವ ರಾಜಕೀಯ ಪ್ರತಿಕ್ರಿಯೆಗಳಂತೂ ಈಗಿನ ಭಾರತೀಯ ಸಮಾಜದ ಮೇಲೆ ಪ್ರಭಾವ ಬೀರುತ್ತವೆ.

ಆರ್ಥಿಕ ಮುಖದ ಅನೇಕ ಸಂಗತಿಗಳು ಈಗಾಗಲೇ ನಮ್ಮ ಸಾಹಿತ್ಯ ವಿಮರ್ಶೆಯಲ್ಲಿ ಅನೇಕ ಬಾರಿ ಚರ್ಚೆಯಾಗಿವೆ. ಇಂಗ್ಲೆಂಡ್ ನಮ್ಮನ್ನು ಒಮ್ಮೆ ಹೀರಿಬಿಟ್ಟಿದೆ. ಈಗ ಅನ್ಯದೇಶಗಳ ಸಾಲದ ಹೊರೆ ನಮ್ಮ ಪ್ರತಿಯೊಬ್ಬನ ಜೀವನ ಕ್ರಮದ ಮೇಲೆ ಗಾಢವಾದ ಪರಿಣಾಮ ಬೀರುತ್ತಿದೆ. ನಮ್ಮ ದೇಶ ಆಯಾಸದಿಂದ ಏದುಸಿರು ಬಿಡುತ್ತಿರುವ ಸ್ಪಷ್ಟತೆಯಂತೂ ಈಗ ನಮಗೆ ಗೊತ್ತಾಗುತ್ತಿದೆ. ಒಂದು ರೀತಿಯಲ್ಲಿ ಈ

ರೀತಿಯು ಚಾರಿತ್ರಿಕ ಒತ್ತಡ ನಮ್ಮ ಕವಿತೆಗಳ ನಿಟ್ಟುಸಿರಿನಲ್ಲಿ ಹೊರಹೊಮ್ಮುತ್ತಿವೆ. ತಾತ್ವಿಕ ಮುಖವಂತೂ ಇದರಿಂದ ರೂಪಗೊಂಡಿದೆ. ಈ ಮೇಲೆ ಸೂಚಿಸಿದಂತೆ ಅನುಕರಣೆಯು ತಾತ್ವಿಕತೆಯೂ ಈಗ ತನ್ನ ಸ್ವಂತ ಚಹರೆಯನ್ನು ಪಡೆದುಕೊಂಡು ಬಿಟ್ಟಿದೆ. ಅನುಕರಣೆಯು ಈ ಸಂದರ್ಭದಲ್ಲಿ ಪಶ್ಚಿಮದಿಂದ ಬಿಡುಗಡೆಯಾಗಲು ಪ್ರಯತ್ನಿಸುತ್ತಿದೆ. ಆದರೆ ಇದು ಚರಿತ್ರೆಯಲ್ಲಿ ಅರ್ಥವನ್ನು ಹುಡುಕಿಕೊಳ್ಳುತ್ತಿದೆಯೋ ಇಲ್ಲವೇ ಎಂದು ಹೇಳುವುದು ಕಷ್ಟ. ಈ ಮೂರು ಅಂಶಗಳಿಂದ ನಮ್ಮ ಸಾಮಾಜಿಕ ಮುಖವೊಂದು ಬಣ್ಣಗೆಟ್ಟಂತೆ ಇದೆ—ನಿಜವಾದ ಅರ್ಥದಲ್ಲಿ ಸಾಮಾಜಿಕ ಕೇಂದ್ರದಲ್ಲಿ, ಐಕ್ಯ ಮತ್ತು ಸಂವಾದ ಮೂರು ಕೂಡ ಬಿರುಕಿನ ಧ್ವನಿಯನ್ನು ಸೂಚಿಸುತ್ತವೆ. ಪ್ರಾಯಶಃ ಜಾತಿಯನ್ನು ಇಡಿಯ ಸಾಮಾಜಿಕ ಕೇಂದ್ರವೆಂದು ಭಾವಿಸುವವರು ಈ ಬಿರುಕಿನಿಂದಲೇ ಹೊರಡುತ್ತಾರೆ. ಇಲ್ಲಿನ ಸಂಸ್ಕೃತವನ್ನು ಕನ್ನಡವನ್ನು ನಿರಾಕರಿಸುತ್ತಾ ಇಂಗ್ಲೀಷನ್ನು ಒಪ್ಪುವವರ ಮನಸ್ಸು ಇಂಗ್ಲೀಷರ ಸಂಸ್ಕೃತಿಯನ್ನು ಒಂದು ಕೇಂದ್ರವೆಂದು ಭಾವಿಸುತ್ತದೆ. ಹೀಗೆ ಅಂಟಿದ ನಂಟು ಎಲ್ಲಿ ಕೊನೆಯಾಗುತ್ತದೆಂದು ಯೋಚಿಸಬೇಕಾಗಿದೆ. ಪ್ರಭು ಸಂಸ್ಕೃತಿಯನ್ನು ಒಪ್ಪಿಕೊಂಡ ದೀನವಾದ ಭಾರತೀಯ ಮನಸ್ಸು ಒಡೆದ ಕನ್ನಡಿಯಲ್ಲಿ ನೋಡಲು ಶುರುಮಾಡಿದ್ದೊಂದು ದುರಂತ. ಆದರೆ ಇದು ಸಾಂಸ್ಕೃತಿಕ ರಂಗಗಳಲ್ಲಿ ನುಂಗಲಾರದ ತುತ್ತು: ಹಾಗೆಂದು ಉಗುಳುವಂತೆಯೂ ಇಲ್ಲ.

ಈ ಮೇಲಿನ ವಾದಗಳ ಮುಖಾಂತರ ಹೇಳಬಹುದಾದದ್ದು ಮುಖ್ಯವಾದದ್ದಿಷ್ಟು.

೧. ನಮ್ಮ ಸಾಮಾಜಿಕ ಸಂಸ್ಕೃತಿಯು ವಿವಿಧ ದೆಸೆಗಳಿಂದ ಅನೇಕ ರಹದಾರಿಗಳನ್ನು ಕಂಡುಕೊಳ್ಳುತ್ತಿದೆ.
೨. ಭಾರತೀಯ ನಮೂನೆಯ ಸಾಮಾಜಿಕ ಸ್ವರೂಪ ಒಡೆದು ಹೋಗಿದೆ.
೩. ಓದಿದ ಕೆಲವರು ಧರ್ಮದಲ್ಲಿ ಅರ್ಥವನ್ನು ಕಳೆದುಕೊಂಡಿದ್ದಾರೆ. ವಿಜ್ಞಾನವನ್ನು ಒಪ್ಪಿಕೊಳ್ಳಲಾಗಿಲ್ಲ. ಈ ದ್ವಂದ್ವ ನಮ್ಮನ್ನು ಕಾಡುತ್ತಿದೆ.
೪. ಚರಿತ್ರೆಯ ಜೊತೆಗೆ ನಿಜವಾದ ಬೆರೆಯಲಾಗದ ಅಮೂರ್ತ ತಾತ್ವಿಕತೆಯನ್ನು ಸ್ವೀಕರಿಸಿಕೊಂಡು ಒದ್ದಾಡುವ ಸ್ಥಿತಿಗೆ ತಲುಪಿದ್ದೇವೆ.
೫. ಇಂಗ್ಲೀಷಿನ ಪ್ರಭು ಸಂಸ್ಕೃತಿ ಕೊಟ್ಟ ಬಳುವಳಿಯಿಂದಾಗಿ ಅಲ್ಲಿನ ಎಲ್ಲವನ್ನು ಸಂದರ್ಭ ಬಿಟ್ಟು ಸ್ವೀಕರಿಸುವ ಹಂತಕ್ಕೆ ತಲುಪಿದ್ದೇವೆ.

ಕ. ರಾಘವೇಂದ್ರರಾವ್ ಅವರ ಚರ್ಚೆಯೊಂದು ಹೀಗಿದೆ.

ವಸಾಹತು ದೇಶಗಳಲ್ಲಿಯ ಸಾಹಿತ್ಯ ಪರಂಪರೆಗಳ ಬೆಳವಣಿಗೆಯಲ್ಲಿ ವಿಶಾಲಾರ್ಥದಲ್ಲಿಯಾದರೂ ಒಂದು ನಿರ್ದಿಷ್ಟ ವಿನ್ಯಾಸವನ್ನು ನಾವು ಗುರುತಿಸಬಹುದಾಗಿದೆ. ಮೊದಲನೆಯದು, ವಸಾಹತು ಪೂರ್ವ ಚರಿತ್ರೆ ಮತ್ತು ವಸಾಹತು ಚರಿತ್ರೆಗಳು

ತಮ್ಮ ಕರುಳ ಸಂಬಂಧವನ್ನೇ ಕಡಿದುಕೊಳ್ಳುವ ರಂಧ್ರ ಬಿರುಕಿನ ಸಂದರ್ಭ. ಎರಡನೇಯದು, ವಸಾಹತು ಸಂಸ್ಕೃತಿ ಮೆಟ್ರೋಪಾಲಿಟನ್ ಪ್ರಭು ಸಂಸ್ಕೃತಿಗೆ ಅಡಿಯಾಳಾಗಿರುವ ಆಶ್ರಿತ ಪರಿಸ್ಥಿತಿ. ಮೂರನೇಯದು, ರಾಜಕಾರಣ ಪಟ್ಟದಲ್ಲಿ ಪ್ರತಿಭಟನೆ ಹಾಗೂ ಸವಾಲೊಡ್ಡುವ, ಆದರೆ ಸಂವಾದಿಯಾಗಿ ಯಾವುದೇ ಸಹಜ, ಕ್ರಿಯಾತ್ಮಕ ಸೃಜನಶೀಲ ಸಾಧನೆಗೆ ಸಾಧ್ಯವಾಗದಿರುವ ಸ್ಥಿತಿ. ನಾಲ್ಕನೇಯದು ಹೆಚ್ಚು ಸಮಾಜವಾದ ಸಮತೂಕದ, ಅನುರೂಪ ಸಂಬಂಧದ ಸನ್ನಿವೇಶ. ಐದನೇಯದು ಮತ್ತು ಕೊನೆಯದು ಹೊಸದೇನೇ ಪರಂಪರೆಯನ್ನು ಸಿದ್ಧಾಂತ ಹಾಗೂ ಸಂಪ್ರದಾಯಗಳಿಗೆ ಪ್ರಸ್ತುತವೆನ್ನಿಸುವಂತೆ ಕಟ್ಟುವ ಸಂಸ್ಕೃತಿ ವಿಶಿಷ್ಟ ಕ್ರಿಯಾಶೀಲ ಪ್ರಕ್ರಿಯೆ ಆರಂಭಗೊಳ್ಳುವ ನಿರ್ಧಾರಾತ್ಮಕ ಕ್ಷಣ.

ಇದನ್ನು ಇಟ್ಟುಕೊಂಡು ಹೇಳುವುದಿದ್ದರೆ ನನಗೆ ನಮ್ಮ ಮುಂದಿರುವ ಸಾಂಸ್ಕೃತಿಕ ವಾಗ್ವಾದಗಳು ಸಾಂಸ್ಕೃತಿಕ ಅನನ್ಯತೆಯನ್ನು ರೂಪಿಸಲು ಬಂದಿರುವ ವಾಗ್ವಾದಗಳಂತೆ ಭಾಸವಾಗುತ್ತವೆ ಈಗ ಇರುವ ಸಾಂಸ್ಕೃತಿಕ ಅನನ್ಯತೆಯ ಪ್ರಶ್ನೆಯು ನಮ್ಮ ಮುಂದೆ ಹೀಗಿದೆ.

ನಮ್ಮ ಸಾಮಾಜಿಕ ವಿನ್ಯಾಸವನ್ನು ನೋಡಿಕೊಂಡು ಮುಂದುವರೆಸುತ್ತಿದ್ದೇನೆ. ಸಾಮಾಜಿಕವಾಗಿ ತಲ್ಲಣ ಪ್ರಾರಂಭವಾಗಿದೆ, ಸಾಂಸ್ಕೃತಿಕ ಅನನ್ಯತೆಯ ವಾಗ್ವಾದವು ಶುರುವಾದ ಸನ್ನಿವೇಶವಿದು. ಈ ಪರಿಣಾಮಗಳಿಂದ ಸಾಹಿತ್ಯ ಕೃತಿಗೆ ಆಯ್ಕೆ ಮಾಡಿಕೊಳ್ಳುವ ವಸ್ತು ಮತ್ತು ಆಲೋಚನಾ ಕ್ರಮವು ಎರವಲು ಸಾಮಗ್ರಿಯನ್ನು ಹೊರತುಪಡಿಸಿಕೊಳ್ಳುತ್ತಿದೆ. ಈಗ ಬರೆಯುತ್ತಿರುವ ಅನೇಕ ಜನ ಬರಹಗಾರರು ಈ ಬೇರು ಹಿಡಿಯುವ ಪ್ರಯತ್ನದಲ್ಲಿದ್ದಾರೆ. ಸಾಂಸ್ಕೃತಿಕ ಕಾಳಜಿಯು ಇಲ್ಲಿಂದ ಪ್ರಾರಂಭವಾಗಿದೆ. ವಿಶ್ವದ ಪರಿಕ್ರಮಗಳನ್ನು ಸೂಕ್ಷ್ಮ ಅವಲೋಕನದಿಂದ ಪರಿಭಾವಿಸುವ ಮತ್ತು ವಸಾಹತು ಮನಸ್ಸಿನ ಉಲ್ಬಣವನ್ನು ತೊಡೆಯುವ ಪ್ರಯತ್ನದ ಹಾದಿ ಶುರುವಾಗಿದೆ. ವಿಘಟಿತ ಸಮಾಜದ ಅನೇಕ ಅನುಮಾನಗಳ ಮಧ್ಯ ಕನ್ನಡ ಸಾಹಿತ್ಯವು ಅವತರಣಿಕೆಯನ್ನು ಪಡೆದುಕೊಳ್ಳುತ್ತಿದೆ. ಜಾತಿ–ಜಾತಿಯ ನಡುವಿನ ಅನುಮಾನಗಳು ಸೃಜನ ಶೀಲತೆಗೆ ಚೌಕಟ್ಟು ರೂಪಿಸುತ್ತಿರುವುದು ಈ ವಾದಕ್ಕೆ ಪುಷ್ಟಿ ಕೊಡುತ್ತದೆ.

ಅನಂತಮೂರ್ತಿಯವರು ಈ ಚರ್ಚೆಯನ್ನು ಬೇರೊಂದು ಸಂದರ್ಭದಲ್ಲಿ ಹೀಗೆ ಮಂಡಿಸುವ ಪ್ರಯತ್ನವನ್ನು ಮಾಡಿದ್ದಾರೆ. ಅನಂತ ಮೂರ್ತಿಯವರ ಪ್ರಕಾರ, ಇಂಗ್ಲೀಷ್ ಬ್ರಾಹ್ಮಣ, ಕನ್ನಡ ಶೂದ್ರ. ಈ ಚರ್ಚೆಗೆ ದೊಡ್ಡ ಆಯಾಮವಿದೆ

ಯೆಂದು ಅನ್ನಿಸುವುದಿಲ್ಲ. ಇಂಗ್ಲೀಷನ್ನು ಕುರಿತು ಹೇಳುವಾಗ ಅನಂತಮೂರ್ತಿಯವರು 'ಬ್ರಾಹ್ಮಣ' ಎನ್ನುವ ಪದವನ್ನು ಯಾಕೆ ತಂದಿದ್ದಾರೋ ತಿಳಿಯದು. ವಾಸ್ತವವಾಗಿ ಇಂಗ್ಲೀಷ್ ಮತ್ತು ಕನ್ನಡದ ನಡುವೆ ಒಂದು ಸಂವಾದವಿರುತ್ತದೆ. ಈ ಸಂವಾದವಲ್ಲಿ "ಪಾವಿತ್ರ್ಯ" ಎನ್ನುವುದಕ್ಕೆ ಅರ್ಥವಿಲ್ಲ. ದ್ವಂದ್ವದ ಬಗ್ಗೆ ಮಾತ್ರ ಹೇಳುವ ಅನಂತಮೂರ್ತಿಯವರಿಗೆ ಇಂಗ್ಲೀಷ್ ಮತ್ತು ಕನ್ನಡದ ಪ್ರಶ್ನೆ ದ್ವಂದ್ವವಾಗಿಯೇ ಕಾಣುತ್ತದೆ. ಮತ್ತೆ ಮೊದಲ ಪ್ರಶ್ನೆಯ ಕಡೆಗೆ ಬರುತ್ತಿದ್ದೇನೆ: ನಾವು ನಿಜವಾಗಿಯೂ ಎಲ್ಲಿದ್ದೇವೆ ? ಈ ಪ್ರಶ್ನೆಯನ್ನು ನಿಮ್ಮ ಮುಂದಿಡುವಾಗ ನಾನು ತಲ್ಲಣಕ್ಕೆ ಗುರಿಯಾಗಿ ಈ ಮಾತನ್ನು ಹೇಳುತ್ತಿಲ್ಲ. 'ವಸಾಹತುಶಾಹಿ' 'ವಸಾಹತುಶಾಹಿ' ಅಂತ ಮಾತಾಡುತ್ತ ಕೂತರೆ ಇದುವೇ ಒಂದು ಭಯಾನಕ ಸ್ವಪ್ನವಾಗಿ ಈ ವಸಾಹತುಶಾಹಿ ಸಂಸ್ಕೃತಿಯಲ್ಲಿ ನಾವಿನ್ನೂ ಇದ್ದೇವೆ ಅಂತ ಹೇಗಾದರೂ ತೆಕ್ಕೆಯಿಂದ ಬಿಡಿಸಿಕೊಳ್ಳುವ ಶತಪ್ರಯತ್ನಕ್ಕೆ ನಾವು ತೊಡಗುತ್ತೇವೆ. ಈ ಭ್ರಮೆಯಿಂದ ನಾವು ಇನ್ನೂ ಅನೇಕ ಸಮಸ್ಯೆಗಳ ಬಗೆಗೆ ಯೋಚಿಸುವುದನ್ನು ಮರೆಯುವುದಿಲ್ಲವೆ ? ನನಗೆ ವಸಾಹತು ಶಾಹಿ ದುಃಸ್ವಪ್ನಕ್ಕಿಂತ ತಿಂಗಳ ಕೊನೆಯಲ್ಲಿ ಪರದಾಡುವ ಹೊತ್ತಿನಲ್ಲಿ ರಾತ್ರಿ ಬೀಳುವ ಕನಸು ಹೆಚ್ಚು ಭಯಾನಕವಾಗಿ ಬೆವರುತ್ತೇನೆ. ಬೆಲೆಯ ಏರಿಕೆಯು ನನ್ನಲ್ಲಿ ಸೃಷ್ಟಿಸುವ ಆತಂಕವು ಕೇವಲ ಒಬ್ಬ ಯೂನಿವರ್ಸಿಟಿಯ ಅಧ್ಯಾಪಕನಿಗಿರುವ ಆತಂಕವಲ್ಲ. ಕೆಳವರ್ಗದ ಹಾಗೂ ಮಧ್ಯಮ ವರ್ಗದ ಜನತೆಯ ಒಟ್ಟು ಬಿಕ್ಕಟ್ಟುಗಳಲ್ಲಿ ಈ ದುಃಸ್ವಪ್ನವೂ ಸೇರಿಕೊಂಡಿದೆ ಎಂದು ಭಾವಿಸುತ್ತೇನೆ. ಇದು ತಕ್ಷಣದ ಸಮಸ್ಯೆಯಾದರೂ ಒಂದು ಅರ್ಥದಲ್ಲಿ ಇದು ಮುಖ್ಯ ಆಗಿದೆ. ಈ ಸಮಸ್ಯೆಗಳ ಕುರಿತಂತೆ 'ನಾವು' ಒಂದೇ ರೀತಿಯಲ್ಲಿ ಯೋಚಿಸುತ್ತಿದ್ದೇವೆ. ಈ ಸಮಸ್ಯೆಯಲ್ಲಿ ಪೂರ್ವ ಪಶ್ಚಿಮ ಅನ್ನುವುದು ಮುಖ್ಯವಲ್ಲ. ನನ್ನ ಸಮಸ್ಯೆ ಇರುವುದು ಈ ತರಹದ ಸಮಸ್ಯೆ ಕುರಿತು ನಾವೇಕೆ ಗಂಭೀರವಾಗಿ ಯೋಚಿಸುತ್ತಿಲ್ಲ ? ನಮ್ಮ ಬುದ್ಧಿಜೀವಿಗಳ ಚೌಕಟ್ಟಿನ ಒಳಗಡೆ ಈ ಸಮಸ್ಯೆ ಬರುವುದಿಲ್ಲವೆಂದು ಅರ್ಥವೇ ? ಯಾಕೆ ಹೀಗಾಗುತ್ತಿದೆ ? ಈ ಪ್ರಶ್ನೆಯನ್ನು ಸುಮ್ಮನೇ ಇಡುತ್ತಿದ್ದೇನೆ. ಪರ್ಯಾಯ ಸಂಸ್ಕೃತಿಯ ಬಗ್ಗೆ ಮಾತನಾಡುವಾಗಲೂ ಈ ಸಮಸ್ಯೆ ನನ್ನನ್ನು ಹೆಚ್ಚು ಕಾಡುತ್ತದೆ. ವಸಾಹತುಶಾಹಿ ಸಂಸ್ಕೃತಿಯಿಂದ ಉಂಟಾಗಿರುವ ಸಮಸ್ಯೆಗಳ ಸ್ವರೂಪವೇನೆಂದು ಅಸ್ಪಷ್ಟವಾಗಿ ನನಗೆ ಅರ್ಥವಾಗುತ್ತದೆ. ಆದರೆ ನಾವಿಡುವ ಸಾಂಸ್ಕೃತಿಕ ವಾಗ್ವಾದಗಳು ಎಲ್ಲಿ ಹಾದಿ ತಪ್ಪುತ್ತಿವೆ ಎಂದು ಯೋಚಿಸಬೇಕಾಗಿದೆ.

ಈಗ ಹೇಳುತ್ತಿದ್ದೇನೆ, ನನಗೆ ಇಂಗ್ಲೀಷ್ ಮಾತನಾಡಲು ಬಾರದ್ದರಿಂದ ಅದರ ಬಗ್ಗೆ ಭಯವೇ ಹೊರತು ಬೇರಾವುದರಿಂದಲೂ ಅಲ್ಲ. ಅದು ಬಹುಶಃ ಎಲ್ಲ ಭಾಷೆಗೂ ಸಂಬಂಧಿಸಿದ್ದಾಗಿದೆ ಎಂದು ಭಾವಿಸುತ್ತೇನೆ. ಆದರೆ ಕೊನೆಗೊಂದು ಮಾತು ಹೇಳಲೇಬೇಕೆಂದರೆ ನನಗೆ ಶಂಕರಭಟ್ಟ ಮತ್ತು ಯುನಿವರ್ಸಿಟಿ ಪ್ರತ್ಯೇಕ ಚರ್ಚೆಗಳಲ್ಲಿ ತೊಡಗುವುದಕ್ಕಿಂತ ಒಂದು ಚರ್ಚೆಯ ಕಡೆಗೆ ಮುಖ ಮಾಡಿ ನೋಡು ವುದು ಹೆಚ್ಚು ಅಗತ್ಯವೆಂದು ತೋರುತ್ತದೆ. ನಮ್ಮ ವ್ಯಕ್ತಿತ್ವ ಇಲ್ಲಿ ಅಂದರೆ ಈ ಸಮಸ್ಯೆಗಳೊಳಗೆ ಇದೆಯಲ್ಲವೇ ? ಈ ಸಂದರ್ಭದಲ್ಲಿ ಕೇವಲ ಕೆಲವು ಅನುಮಾನ ಗಳನ್ನು ಇಡಲು ಇಲ್ಲಿ ಸಾಧ್ಯವಾಗಿದೆ ಇದು ಖಂಡಿತಕ್ಕೂ ನಿರ್ಧಾರಾತ್ಮಕ ಪ್ರಶ್ನೆ ಗಳಲ್ಲ. ●

(ಅಕ್ಟೋಬರ ೧, ೧೯೯೨ ರಂದು ಕುವೆಂಪು ವಿಶ್ವವಿದ್ಯಾನಿಲಯದ ಇಂಗ್ಲೀಷ್ ವಿಭಾ ಗದಾಶ್ರಯದಲ್ಲಿ 'ವಸಾಹತು ಶಾಹಿ ಅನುಭವ'ದಲ್ಲಿ ನಾವು ನಮ್ಮ ವ್ಯಕ್ತಿತ್ವ ಎಂಬ ವಿಷಯದ ಕುರಿತು ಚರ್ಚೆ ನಡೆಯಿತು. ಈ ಚರ್ಚೆಯ ಸಂದರ್ಭದಲ್ಲಿ ಎತ್ತಲಾಗಿರುವ ಪ್ರಶ್ನೆಗಳಿವು. ಡಾ:ಬಾರಿ, ಡಾ:ವಿ. ಎನ್. ಭಟ್, ಡಾ:ಸದಾನಂದ, ಡಾ:ರಾಜೇಂದ್ರ ಚೆನ್ನಿ. ಡಾ:ರಾಜಾರಾಮ ಹೆಗಡೆ. ಡಾ.ಕಿಶೋರಿ ನಾಯಕ್ ಮೊದಲಾದವರು ತಮ್ಮ ಅಭಿಪ್ರಾಯಗಳನ್ನು ಮಂಡಿಸಿದ್ದರು. ಈ ರೀತಿ ಚರ್ಚೆಯನ್ನೇರ್ಪಡಿಸಿದ ಡಾ: ರಾಜೇಂದ್ರ ಚೆನ್ನಿಯವರಿಗೆ ಕೃತಜ್ಞತೆಗಳು.

ಇದರಲ್ಲಿ ಪ್ರಸ್ತಾಪಿಸಲಾಗಿರುವ ವಿಷಯಗಳನ್ನು ಈ ಹಿಂದೆ ಬೇರೆ ಲೇಖನಗಳಲ್ಲಿ ಪ್ರಸ್ತಾಪಿಸಿದ್ದೇನೆ—ಲೇಖಕ.)

# ಅಂಬಿಗರ ಚೌಡಯ್ಯ : ವ್ಯಕ್ತಿ ಅಭಿವ್ಯಕ್ತಿ

ಎಸ್. ಜಿ. ಸಿದ್ಧರಾಮಯ್ಯ

ಕನ್ನಡ ಸಾಹಿತ್ಯ ಸಂದರ್ಭದಲ್ಲಿ ಹನ್ನೆರಡನೇ ಶತಮಾನ ಒಂದು ವಿಶಿಷ್ಟ ಯುಗ. ಕರ್ನಾಟಕದ ಜನಸಾಮಾನ್ಯರ ಬದುಕಿನಲ್ಲಿ ಮಹತ್ತರ ಬದಲಾವಣೆಯನ್ನು ಬೀರಿದ ಕಾಲಘಟ್ಟ ಇದು. ಹಿಂದೆಂದೂ ಇಂಥ ಒಂದು ಬದಲಾವಣೆ ಭಾರತದ ಯಾವ ಮೂಲೆಯಲ್ಲೂ ನಡೆದ ದಾಖಲಾತಿ ಇಲ್ಲ.

ವರ್ಣಾಶ್ರಮ ವ್ಯವಸ್ಥೆಯ ವಿರುದ್ಧ ತಿರುಗಿ ಬಿದ್ದು ಮಾನವೀಯ ನೆಲೆಯಲ್ಲಿ ಮನುಷ್ಯ ಸಂಬಂಧಗಳನ್ನು ಗೌರವಿಸಿದಂತೆ ಬದಲಾವಣೆಗೆ ಹಾತೊರೆದ ಚಳವಳಿ ಇದು. ಹಾರುವ ಮೊದಲಾಗಿ ಅಂತ್ಯಜ ಕಡೆಯಾಗಿ ಎಲ್ಲರನ್ನು ಒಂದೇ ಭಾವದಲ್ಲಿ ಕಾಣುವ ಬಸವಣ್ಣನವರ ಮಾನವೀಯ ಹಂಬಲಿಕೆಗಳ ಫಲರೂಪಿಯಾದ ಈ ಹೋರಾಟ ತನ್ನ ಗರ್ಭದಲ್ಲಿ ಹಲವು ಗೊಂದಲ ವೈರುಧ್ಯ ಸಣ್ಣತನ ಅಪಮಾನ ಅನುಮಾನಗಳ ಜತೆಗೆ ಪ್ರೀತಿ ವಾತ್ಸಲ್ಯ ಸಹಾನುಭೂತಿ ಸಮಾನತೆ ಇತ್ಯಾದಿ ಮಾನವೀಯ ಕಾಮನೆಗಳನ್ನು ಹುದುಗಿಸಿಕೊಂಡಿದೆ. ಕಾರಣ ಈ ಆಂದೋಲನದಲ್ಲಿ ಭಾಗವಹಿಸಿದವರೆಲ್ಲ ಭಾರತದ ವರ್ಣವ್ಯವಸ್ಥೆಯ ಜಾತಿಗೋಡೆಗಳ ನಡುವಿನಿಂದ ಮೊದಲಬಾರಿಗೆ ಹೊರಬಂದು ಮನುಷ್ಯ ಸಂಬಂಧಗಳ ಬೆಳಕಿಗೆ ತೆರೆದುಕೊಳ್ಳತೊಡಗಿದವರು. ಇಂಥ ಬೆಳಕಿನಲ್ಲಿ ರುಚಿ–ವಾಸನೆ, ಮಡಿ–ಮೈಲಿಗೆ ಆಚಾರ–ವಿಚಾರ, ಆಸೆ–ಆಮಿಷ, ಗಂಡು–ಹೆಣ್ಣು, ಮೇಲು–ಕೀಳು ಭಾಷೆ-ಭಾವನೆ, ಸಂಕೋಚ-ವಿಸ್ತಾರ ಇತ್ಯಾದಿ ಅಂಶಗಳು ಪರಸ್ಪರ ಢಿಕ್ಕಿ ಹೊಡೆದಿರುವುದು ಸಹಜ. ಆದರೆ ಈ ಚಳುವಳಿಯಲ್ಲಿ ಇವೆಲ್ಲವನ್ನೂ ಸಾವರಿಸಿಕೊಂಡು ಬೆಳೆಯುವ ಮನೋಧರ್ಮ ವ್ಯಕ್ತಿ ನೆಲೆಯಿಂದ ಸಮಷ್ಟಿಯ ವ್ಯಾಪ್ತಿಯವರೆಗೆ ಹಬ್ಬಿಹರಿದಿದ್ದ ಜೀವಶಕ್ತಿಯಾಗಿತ್ತು. ಅನುಭವ ಮಂಟಪ ಮಹಾಮನೆಗಳ ಕ್ರಿಯೆ ಮತ್ತು ಸಂವಾದಾತ್ಮಕ ವಚನಗಳು ಇದಕ್ಕೆ ಉತ್ತಮ ಉದಾಹರಣೆಗಳಾಗುತ್ತವೆ.

ಈ ಆಂದೋಲನ ಪಡೆದ ಅತ್ಯುಚ್ಚ ಹಾಗೂ ಅರ್ಥಪೂರ್ಣ ನಡೆ ಎಂದರೆ ಪ್ರತಿಲೋಮ ವಿವಾಹ. ಈ ವಿವಾಹದ ಪರಿಣಾಮ ಕಾರಣಗಳು ವರ್ಣವ್ಯವಸ್ಥೆಯ ಕೊಳಕು ಕ್ರೌರ್ಯಗಳನ್ನು ತೋರುತ್ತವೆ. ಭಾರತದ ಮೂಲಭೂತವಾದಿ ಧಾರ್ಮಿಕ ವ್ಯವಸ್ಥೆಯನ್ನು ಆದಿಯಿಂದಲೂ ಪೋಷಿಸಿಕೊಂಡು ಬಂದ ರಾಜಕೀಯ ಶಕ್ತಿ ಇಲ್ಲಿಯೂ ಈ ಚಳುವಳಿಯ ಬೆಳವಣಿಗೆಗೆ ದಮನಕಾರಿಯಾಗಿ ವರ್ತಿಸಿರುವುದು ಐತಿಹಾಸಿಕ ಸತ್ಯ.

ಇಂಥ ವಚನ ಚಳುವಳಿಯ ನಡುವೆ ಅದುವರೆಗೂ ಬಾಯಿ ಇದ್ದೂ ಇಲ್ಲದಂತಾಗಿದ್ದ ಅಸಂಖ್ಯ ಜೀವಗಳು ಮಾತಾಡತೊಡಗಿದವು. ಸತ್ವ ಇದ್ದೂ ಪ್ರಕಟಗೊಳಿಸಿಕೊಳ್ಳಲಾಗದ, ಆಲೋಚನೆಗಳಿದ್ದೂ ಹಂಚಿಕೊಳ್ಳಲಾಗದ ಸ್ಥಿತಿಯಲ್ಲಿದ್ದ ಅಪಾರ ಪ್ರತಿಭೆಗಳು ಅನಾವರಣಗೊಳ್ಳತೊಡಗಿದವು. ಈ ದನಿಗಳು ಅಪಾರವಾದಷ್ಟೇ ವೈವಿಧ್ಯತೆಯ ವಿಶಿಷ್ಟತೆಯಿಂದ ಕಂಗೊಳಿಸಿವೆ.

ಅಂಬಿಗರ ಚೌಡಯ್ಯ ಒಬ್ಬ ಕೆಳವರ್ಗದ ವಚನಕಾರ. ಕೆಳವರ್ಗದ ವಚನಕಾರರ ಒಂದು ವಿಶೇಷವೆಂದರೆ ತಾವು ಕೈಗೊಂಡಿದ್ದ ಕಾಯಕವನ್ನೇ ತಮ್ಮ ಆಧ್ಯಾತ್ಮ ಚಿಂತನೆಯ ಪ್ರಕಟಣೆಗೆ ಮಾಧ್ಯಮವಾಗಿಸಿಕೊಂಡಿರುವುದು. ಈ ಪ್ರಕಟಣೆ ಎರಡು ರೀತಿಯಲ್ಲಿ ವ್ಯಕ್ತಗೊಂಡಿದೆ. ಒಂದು ನಡೆಯ ಮುಖೇನ: ಅಂದರೆ ಆಚರಣೆಯೊಳಗೆ ಕಾಯಕವೇ ಕೈಲಾಸವೆಂದು ಬಸವಣ್ಣ ಸಾರಿದ ತತ್ವವನ್ನು ಬಾಳಾಗಿಸಿ ತೋರಿಸುವುದರ ಮುಖೇನ. ಹೀಗೆ ಬಾಳಿದ್ದರಿಂದ ಅವರ ಭಕ್ತಿ ಗುಪ್ತವಾಗಿದ್ದದ್ದೇ ಹೆಚ್ಚು. ಈ ಗುಪ್ತ ಭಕ್ತಿ ಪ್ರಕಟವಾಗಲು ಅವರು ಎಂದೂ ಇಚ್ಛಿಸಿದವರಲ್ಲ. ಅದು ಅವರಿಗೆ ಬೇಕಿಲ್ಲದ ಹೊನ್ನಶೂಲ. ಈ ಗುಪ್ತಭಕ್ತರು ತಮ್ಮ ಶ್ರದ್ಧೆ ಪ್ರಾಮಾಣಿಕತೆಗಳಿಂದ ಅಂತರಂಗದ ಪಾರದರ್ಶಕತದಲ್ಲಿ ತಮ್ಮ ವ್ಯಕ್ತಿತ್ವವನ್ನು ಬೆಳಗಿಸಿಕೊಳ್ಳುತ್ತಿದ್ದರು. ಈ ಬೆಳಗಿನಲ್ಲಿ ಕಾಯಕದ ಪಾತ್ರ ಅಪಾರ. ಕಾಯಕ ಯಾವುದಾದರೂ ಅದು ಮಾನವ ಕಲ್ಯಾಣಕ್ಕೆ ಸಾಧಕವಾದದ್ದೂ, ಶ್ರದ್ಧೆ ಪ್ರಾಮಾಣಿಕತೆಗಳನ್ನು ತನ್ನ ಗತಿಶೀಲತೆಯಾಗಿಸಿಕೊಂಡದ್ದೂ ಆಗಿರಬೇಕು. ಇದರಿಂದಾಗಿ ಕಾಯಕ ಜೀವಿಯ ವ್ಯಕ್ತಿತ್ವದ ಹಿರಿಮೆ ಗರಿಮೆಗಳು ಮೆರೆಯುತ್ತಿದ್ದವು. ಬೇರೆ ಬೇರೆ ಕಾಲಘಟ್ಟಗಳಲ್ಲಿ ಆಗಿಹೋಗಿರುವ ಭಕ್ತರು ಭಕ್ತಿಯನ್ನು ಮೆರೆಯುತ್ತಿದ್ದ ರೀತಿಗೂ ವಚನಕಾರರು ಈ ರೀತಿ ತಮ್ಮ ಕಾಯಕದ ಒಡಲಲ್ಲಿ ಭಕ್ತಿಯನ್ನು ಬೆಳೆಸುತ್ತಿದ್ದ ರೀತಿಗೂ ಮೂಲಭೂತ ವ್ಯತ್ಯಾಸಗಳಿವೆ. ಈ ವ್ಯತ್ಯಾಸ ಜೀವನ ಶೈಲಿಗೆ ಸಂಬಂಧಿಸಿದ್ದು.

ಇನ್ನು ಪ್ರಕಟಣೆಯ ಎರಡನೇ ವಿಧಾನ: ಈ ಭಕ್ತರಲ್ಲಿ ಕೆಲವರು ಮಾಡಿರುವ ವಚನ ರಚನೆಗಳು, ಇವರು ತಮ್ಮ ಕಾಯಕದ ಪರಿಭಾಷೆಗಳನ್ನು ಬಳಸಿಕೊಂಡು ಕಾಯಕದ ವಿಧಿ ವಿಧಾನಗಳನ್ನು ವಿವರಿಸುತ್ತಾ ಅದರ ಜತೆ ಆಧ್ಯಾತ್ಮ ಚಿಂತನೆಯನ್ನು

ಶಿವಪರಭಾವನೆಯನ್ನು ಪ್ರಕಟಿಸುತ್ತಿದ್ದರು. ಇಂಥ ರಚನೆಗಳ ಅಂತರ್ಯದಲ್ಲಿಯೂ ಕಾಯಕವನ್ನು ಪೂಜೆಯಾಗಿಸಿಕೊಂಡಿರುವ ಕಾಯಕ ಗೌರವಭಾವ ಪ್ರಧಾನವಾಗಿ ಕಾಣುತ್ತದೆಯೇ ಹೊರತು ಕಾಯಕದಿಂದ ಆಚೆಗೆ ಹೋದಂತೆ ಆ ಚಿಂತನೆ ಉಳಿಯುವುದಿಲ್ಲ. ಹೀಗಾಗಿ ಈ ಅಭಿವ್ಯಕ್ತಿ ಶ್ರಮಿಕ ನೆಲೆಯದು, ಜನಪರವಾದದ್ದು. ಈ ಅಭಿವ್ಯಕ್ತಿ ವಿಧಾನ ಕೂಡ ವಿಶಿಷ್ಟವಾದದ್ದು.

ಕೆಲವು ವಚನಕಾರರಲ್ಲಿ ಮೇಲಿನ ಈ ಎರಡೂ ರೀತಿಗಳು ಒಂದರೊಳಗೊಂದು ಅಭಿನ್ನವಾಗಿರುವ ಸ್ವರೂಪವವು. ಅಂಬಿಗರ ಚೌಡಯ್ಯ, ಇಂಥ ಅಭಿವ್ಯಕ್ತಿ ಪರಂಪರೆಯನ್ನು ಬೆಳೆಸಿದ ಶರಣರ ಸಾಲಿಗೆ ಸೇರಿದವನು. ದೋಣಿ ನಡೆಸುವ ಕಾಯಕವನ್ನು ಕೈಗೊಂಡು ವೀರಶೈವ ಧರ್ಮವನ್ನು ಜೀವನ ಶೈಲಿಯಾಗಿಸಿಕೊಂಡಿದ್ದ ಚೌಡಯ್ಯ ನೇರನುಡಿಯ ನಿಷ್ಠುರವಾದಿ. ಅವನ ವಚನಗಳಲ್ಲಿ ಅವನ ಸ್ವಭಾವ ಪಾರದರ್ಶಕವಾಗಿದೆ. ಸಿದ್ಧಾಂತರೂಪದ ಹೇಳಿಕೆಗಳಿಗಿಂತ, ಅನುಭಾವಿಕ ನೆಲೆಯ ಬೆಡಗಿನ ನುಡಿಗಳಿಂತ ಸಿಟ್ಟುಸೆಡವಿನ ನೆಲೆಯ ಖಂಡನೆ ತಿರಸ್ಕಾರ ಆತ್ಮವಿಮರ್ಶೆಯ ನೇರ ಮಾತುಗಳು ಅವನ ವಚನಗಳ ಶರೀರ ಸತ್ವ.

ಇವನ ಆತ್ಮಾಭಿಮಾನ ಅಪಾರವಾದುದು. ವರ್ಣವ್ಯವಸ್ಥೆಯಲ್ಲಿ ನೋವುಂಡ ನೆಲೆ ಮೂಲಕ್ಕೆ ಸೇರಿದವನಾದ ಚೌಡಯ್ಯ ತನ್ನ ಕಾಯಕವನ್ನು ಎತ್ತಿ ಅಣಕದ ಮಾತನ್ನಾಡುತ್ತಿದ್ದವರಿಗೆ

ಅಂಬಿಗ ಅಂಬಿಗ ಎಂದು ಕುಂದಂ ನುಡಿಯದಿರು
ನಂಬಿದರೆ ಒಂದೇ ಹುಟ್ಟಲಿ ಕಡೆಯ
ಹಾಯಿಸುವನಂಬಿಗರ ಚೌಡಯ್ಯ.

ಎಂದು ಆತ್ಮಾಭಿಮಾನದಿಂದ ಸವಾಲಿನ ರೀತಿಯಲ್ಲಿ ವ್ಯಕ್ತಿತ್ವದ ಔನ್ನತ್ಯವನ್ನು ಮೆರೆದಿದ್ದಾನೆ. ಇದು ಆತ್ಮಪ್ರತಿಷ್ಠೆಯ ಮಾತಾಗದೆ ಆತ್ಮಾಭಿಮಾನದ ಅನಿವಾರ್ಯ ದನಿಯಾಗಿದೆ. ಒಂದೇ ಹುಟ್ಟಲಿ ಎಂಬ ಪದ ಶ್ಲೇಷಾರ್ಥದಿಂದ ಕೂಡಿದೆ, ಕಾಯಕದ ಪರಿಣತಿ ಮತ್ತು ವ್ಯಕ್ತಿತ್ವದ ಔನ್ನತ್ಯ ಈ ಎರಡೂ ನೆಲೆಗೆ ಸೇರಿದ ಅರ್ಥ ಧ್ವನಿಯನ್ನು ಸುಂದರವಾಗಿ ವ್ಯಂಜಿಸಿದೆ.

ತಡೆಯಿಲ್ಲದ ಮಹಾನದಿಯಲ್ಲಿ
ಒಡಲಿಲ್ಲದ ಅಂಬಿಗ ಬಂದಿದ್ದಾನೆ
ಹಿಡಿವ ಬಿಡುವ ಮನವ ಬೆಲೆಗೊಟ್ಟೊಡೆ

ಕಡೆಗಾಣಿಸಿ ಹಾಯಿಸುವ ಹೊಳೆಯನು
ನುಡಿಯಿಲ್ಲದ ನಿಸ್ಸೀಮಗ್ರಾಮದಲ್ಲಿರಿಸುವೆನೆಂದಾತ
ನಂಬಿಗ ಚೌಡಯ್ಯ

ನುಡಿಯಿಲ್ಲದ ನಿಸ್ಸೀಮಗ್ರಾಮದಲ್ಲಿರಿಸುವ ಇವನ ಆತ್ಮವಿಶ್ವಾಸ ಅದಮ್ಯವಾದುದು. ಈ ಆತ್ಮವಿಶ್ವಾಸ ಒಣ ಅಹಂಕಾರವಲ್ಲ, ತನ್ನ ತಾನರಿದ ನೆಲೆಯ ಪರಿಪಕ್ವ ಭಾವ. ಈ ಭಾವ ನೆಲಕ್ಕಂಟಿ ಮಾತನಾಡುವ ನೆಲೆಯದೇ ಹೊರತು ನೆಲದಾಚೆಯ ಮತ್ತಾವುದೋ ಭ್ರಮೆಗೆ ಸಿಲುಕಿದ್ದಲ್ಲ.

ಕಂಗಳನಾವೆ ಹಲುಗೋಲವಾಗಿ
ನೋಡುವ ದೃಷ್ಟಿ ಅಂಬಿಗವಾಗಿ
ಕರಣೇಂದ್ರಿಯವೆಂಬ ಬಹುಜನಂಗಳು ಕೂಡಿ
ಆಸೆಯೆಂಬ ಹೊಳೆಯ ದಾಟುವದಕ್ಕೆ ಹುಟ್ಟ ಕಾಣದೆ
ಹಗಲು ಈಚೆ ಉಳಿಯಿತ್ತೆಂದನಂಬಿಗ
ಚೌಡಯ್ಯ.

ಈ ವಚನದಲ್ಲಿ ಕಾಯಕದ ವಿವರಗಳನ್ನು ಬದುಕಿನ ಕಡೆ ಹಾಯುವ ಚಿಂತನೆಗೆ ಸಮೀಕರಿಸಿಕೊಂಡಿರುವುದು ವಿನೂತನವಾಗಿದೆ. ಆದರೆ ಕಡೆ ಹಾಯುವ ಸಂತೋಷಕ್ಕಿಂತ ಕಡೆ ಹಾಯಲು ಅಗತ್ಯವಾಗಿರುವ ಹುಟ್ಟು ಕಾಣದೆ ಉಳಿದ ಸ್ಥಿತಿಯಲ್ಲಿ ವಚನದ ದನಿ ನಿಲ್ಲುತ್ತದೆ. ಇದು ಆಸೆಯ ಆಮಿಷದಲ್ಲಿ ಸುತ್ತುವ ಸುತ್ತಲಿನ ಜನರನ್ನು ಕುರಿತ ಮಾತೇ ಹೊರತು ಆತ್ಮನಿರೀಕ್ಷೆಯ ನೆಲೆಯಲ್ಲಿ ಮೂಡಿದ ನುಡಿಯಲ್ಲ.

ಮೇಲಿನ ಮೂರೂ ವಚನಗಳ ಅಂತರ್ಯದಲ್ಲಿ ಆತ್ಮಾಭಿಮಾನದ ವೈಭವ ಕಾಣುತ್ತದೆಯೇ ಹೊರತು ಆತ್ಮವಿಮರ್ಶೆಯ ಅನುಸಂಧಾನ ಕಾಣಿಸುವುದಿಲ್ಲ. ಇದು ಇಲ್ಲಿ ಗಮನಾರ್ಹವಾದ ಅಂಶ. ಬಸವಣ್ಣನವರ ವಚನಗಳಲ್ಲಿ ಆತ್ಮವಿಮರ್ಶೆಪರಿತೀವ್ರ ಸ್ವರೂಪದಲ್ಲಿ ನಡೆದಿರುವುದನ್ನು ಕಾಣಬಹುದು. ಬಸವಣ್ಣನವರು ತಮ್ಮ ತಮ್ಮ ಮನಸ್ಸು ಹರಿವ ಪರಿಯನ್ನು ನಾಯಿನರಿಯಾದಿಯಾಗಿ ಹಲವು ಪ್ರಾಣಿ ಪಶು ಪಕ್ಷಿ ಕ್ರಿಮಿ ಕೀಟಗಳಿಗೆ ಹೋಲಿಸಿಕೊಂಡು ಆತ್ಮವಿಮರ್ಶೆಯ ಸಿಕಷದ ಮುಖೇನ ಕರ್ತಾರನ ಕಮ್ಮಟದಲ್ಲಿ ಸಲ್ಲುವ ಬಗೆ ಬೆಳೆಸಿಕೊಂಡಿದ್ದಾರೆ. ಮೇಲು ಜಾತಿಯಲ್ಲಿ ಹುಟ್ಟಿದವನಾಗಿ. ಬಿಜ್ಜಳನ ಅರಮನೆಯಲ್ಲಿ ಮಂತ್ರಿಯಾಗಿ, ಚಳವಳಿಯ ಮುಂಚೂಣಿಯಲ್ಲಿ ನಿಂತ ನಾಯಕನಾಗಿ ಬಸವಣ್ಣ ತನ್ನನ್ನು ಈ ರೀತಿಯ ಆತ್ಮ

ವಿಮರ್ಶೆಗೆ ಒಳಗು ಮಾಡಿಕೊಂಡಿರುವದು ಸಹಜವೆ. ಮೇಲರಿಮೆ ಹುಸಿಭಾವದ ನೆಲೆಯಿಂದ ಬಂದ ಮೇಲ್ಜಾತಿಯ ಯಾವ ವಚನಕಾರನಿಗಾದರೂ ಮೇಲರಿಮೆಯನ್ನು ನೀಗಿಕೊಳ್ಳುವುದಕ್ಕೆ, ಬ್ರಾಹ್ಮಣತ್ವವನ್ನು ನೀಗಿಕೊಳ್ಳುವುದಕ್ಕೆ ಈ ರೀತಿಯ ಆತ್ಮವಿಮರ್ಶೆ ಅನಿವಾರ್ಯವೂ ಅಗತ್ಯವೂ ಆಗುತ್ತದೆ. ಆದರೆ ಅವಮಾನ ಹಸಿವುಗಳ ಅಧೋಲೋಕದಿಂದ ಬಂದ ಯಾವ ಕೆಳಜಾತಿಯ ವಚನಕಾರನಿಗೂ ಈ ರೀತಿಯ ಆತ್ಮವಿಮರ್ಶೆ ಅಷ್ಟು ಅಗತ್ಯ ಅನಿವಾರ್ಯವಾಗುವುದಿಲ್ಲ. ಕಾರಣ ಅವರು ಸಮಾನತೆಯ ಬೆಳಕಿಗೆ ಬಂದರೂ ಅಲ್ಲಿಯೂ ಮತ್ತೆ ಮತ್ತೆ ಈ ಸಮಸ್ಯೆಗಳು ಎದುರಾಗಿ ಕಾಡಿಸುತ್ತವೆ, ನೋಯಿಸುತ್ತವೆ. ಅರಿವಿನ ನೆಲೆಯಲ್ಲಿ ನಿಂತಿರುವ ಇವರಿಗೆ ಈಗ ಈ ಸ್ಥಿತಿ ಭರಿಸಬಾರದ ಎಚ್ಚರವಾಗಿ ಸಿಟ್ಟು ತರಿಸುವುದು ಸಹಜ. ಆದರೆ ಈ ಸಿಟ್ಟು ನೈತಿಕ ನೆಲೆಯ ಸಿಟ್ಟು. ಒಡಲಾಳದ ಅನುಭವ ಸತ್ಯದ ಸಿಟ್ಟು ಹೀಗಾಗಿ ನೋವಿನ ನೆಲೆ ಮೂಲದ ನೈತಿಕ ಸಿಟ್ಟಿನ ಮಾತುಗಳು ನಿಷ್ಠುರವಾಗುತ್ತವೆ, ಅಪ್ರಿಯವಾಗಿ ಕೇಳಿಸುತ್ತವೆ. ಅಂಬಿಗರ ಚೌಡಯ್ಯನ ಹಲವು ವಚನಗಳಲ್ಲಿ ಈ ನೋವು ಸಿಟ್ಟು ನೈತಿಕ ಸ್ಥೈರ್ಯ ಆತ್ಮಾಭಿಮಾನದ ಪ್ರತೀಕವಾಗಿ ಆರ್ಭಟಿಸಿದೆ. ಜಗತ್ತಿನ ಯಾವುದೇ ಜನಾಂಗದ ಸಂದರ್ಭದಲ್ಲಿಯೇ ಆಗಲಿ ತುಳಿತಕ್ಕೊಳಗಾದಂತೆ ಬಾಳಿದ ಜನರ ಸಿಟ್ಟಿಗೆ ಒಂದು ನೈತಿಕ ಅಧಿಕಾರವಿರುತ್ತದೆ ಎಂಬುದು ವಿದಿತ ಸತ್ಯ.

ಕುರಿ ಕೋಳಿ ಕಿರುಮೀನ ತಿಂಬವರ
ಊರೊಳಗೆ ಇರು ಎಂಬರು
ಅಮೃತಾನ್ನವ ಕರೆವ ಗೋವ ತಿಂಬವರ
ಊರಿಂದ ಹೊರಗಿರು ಎಂಬರು

ಆ ತನು ಹರುಗೋಲಾಯಿತ್ತು
ಬೊಕ್ಕಣ ಸಿದಿಕೆ ಬಾರುಕೋಲು ಪಾದರಕ್ಷೆ
ದೇವರ ಮುಂದೆ ಬಾರಿಸುವುದಕ್ಕೆ ಮದ್ದಳೆಯಾಯಿತ್ತು

ಈ ಬುದ್ದಲಿಕೆಯೊಳಗಣ ತುಪ್ಪವ ಶುದ್ಧವಮಾಡಿ
ತಿಂಬ ಗುಜ್ಜ ಹೊಲೆಯರ ಕಂಡಡೆ
ಉದ್ದನ ಚಮ್ಮಾಳಿಗೆಯ ತಕ್ಕೊಂಡು
ಬಾಯ ಕೊಲ್ಲುವೆನು ಎಂದಾತ ನಮ್ಮ ಅಂಬಿಗರ ಚೌಡಯ್ಯ

ಕುಲವಾದ ಛಲವಾದ ವಾಗ್ವಾದಂಗಳಲ್ಲಿ
ಹೋರುವನ್ನಬರ ಅರುಹಿಸಿಯರಪ್ಪರೆ ?

ಹಸುಳೆಯ ಕನಸಿನಂತೆ
ಹುಸಿ ಮಾತಿನ ಮಂತ್ರದಂತೆ
ಎಸಕವಿಲ್ಲದ ಅರಿಕೆಯಂತಿರಬೇಕು.
ಎಂದನಂಬಿಗ ಚೌಡಯ್ಯ.

ಕುಲ ಹಲವಾದಡೇನು ಉತ್ಪತ್ತ್ಯನ ಸ್ಥಿತಿ ಲಯ ಒಂದೆ ಭೇದ
ಮಾತಿನ ರಚನೆಯ ಬೇಕಾದಂತೆ ನುಡಿದಡೇನು
ಬಿಡುಮುಡಿಯಲ್ಲಿ ಎರಡನರಿಯಬೇಕೆಂದನಂಬಿಗ ಚೌಡಯ್ಯ.

ಈ ಮೇಲಿನ ಮೂರೂ ವಚನಗಳು ಕುಲಭೇದವನ್ನು ಎತ್ತಿ ಮಾತಾಡುವವರನ್ನು ಕುರಿತು ಆಡಿದ ನುಡಿಗಳು. 'ಬುದ್ಧಲಿಕೆಯೊಳಗಣ ತುಪ್ಪವ ಶುದ್ಧ ಮಾಡಿ ತಿಂಬ ಗುಜ್ಜ ಹೊಲೆಯರ ಕಂಡಂತೆ' ಎಂಬ ಮಾತನ್ನು ಗಮನಿಸಿ. ಹುಟ್ಟಿನಿಂದ ಮಾತ್ರ ಹೊಲೆಯ ಜಾತಿಗೆ ಸೇರಿದವರನ್ನು ಶೋಷಿಸುವ ಅಮಾನವೀಯ ನೆಲೆಯಲ್ಲಿ ನಿಂತ ಹಾರುವರನ್ನು 'ಗುಜ್ಜ ಹೊಲೆಯ' ಶಬ್ದ ಬಳಸಿ ತಿರುಗೇಟು ಕೊಟ್ಟಂತೆ ಖಂಡಿಸಿರುವುದು ಅರ್ಥಪೂರ್ಣವಾಗಿದೆ. ಹುಟ್ಟು ಮತ್ತು ಬದುಕುಗಳ ನಡುವಿನ ಮೌಲ್ಯ ನಿರ್ಣಯದ ವರ್ಣ ವ್ಯವಸ್ಥೆಯ ಹುನ್ನಾರನ್ನು ಜಗ್ಗಿಸಿ ಪ್ರಶ್ನಿಸಿದ ಹೊಡೆತ ಇದಾಗಿದೆ. ಮುಡಿ ಮಡಿಯೆಂದು ಅಡಿಗಡಿಗೆ ಹಾರುವ ಜನರನ್ನು ಕುರಿತು ಇವನು ತೋರಿರುವ ಈ ಆಕ್ರೋಶವನ್ನು ಬಹುಪಾಲು ಯಾವ ವಚನಕಾರನೂ ಕೀರ್ತನಕಾರನೂ ತೋರಿಸಲಿಕ್ಕಿಲ್ಲ. ಅವರ ಪ್ರತಿಕ್ರಿಯೆಗಳೇನಿದ್ದರೂ 'ಕೀಳಿಂಗಲ್ಲದೆ ಹಯನು ಕರೆವುದೆ ?' 'ನಿಮ್ಮ ಕುಲದ ನೆಲೆಯನೇನಾದರೂ ಬಲ್ಲಿರಾ ?' – ಎಂಬ ದಾಕ್ಷಿಣ್ಯಮುಖದ ಪ್ರಶ್ನೆಗಳು. ಆದರೆ ಚೌಡಯ್ಯನ ' ಉದ್ದನ ಚಮ್ಮಾಳಿಗೆಯ ತಕ್ಕೊಂಡು ಬಾಯಕೊಲ್ಲುವ' ಎಚ್ಚರದ ಆತ್ಮಸ್ಥೈರ್ಯದ ಪ್ರತಿಕ್ರಿಯೆ ಆತ್ಮಾಭಿಮಾನದ ಪ್ರತೀಕವಾಗಿದೆ. ಆತ್ಮಾಭಿಮಾನ ಇರುವ ಯಾರೂ ಮಾಡುವ ವೈಚಾರಿಕ ಪ್ರತಿಭಟನೆ ಇದು. ಕಾರಣ ಈ ಪ್ರತಿಭಟನೆಯ ಗರ್ಭದಲ್ಲಿ ಸಹಸ್ರಾರು ವರ್ಷಗಳ ಅವಮಾನ-ಅತ್ಯಾಚಾರಗಳು ಮುಖಾಮುಖಿಯಾಗಿವೆ ಎಂಬುದನ್ನು ಮರೆಯಬಾರದು. ಅಂಬಿಗರ ಚೌಡಯ್ಯನ ಈ ನೈತಿಕ ಆಕ್ರೋಶದ ನೆಲೆಯಲ್ಲಿ ಇತ್ತೀಚಿನ 'ಇಕ್ರಲಾ ಒದೀರ್ಲಾ ಇವರ ಚಮ್ಡ ಎಬ್ರಲಾ' – ಎನ್ನು ದಲಿತ ಕವಿಯ ಬೆಳವಣಿಗೆಯ ಬೇರು ಕಾಣುತ್ತದೆ. ವರ್ಣ ವ್ಯವಸ್ಥೆಯ ಕಟ್ಟುಬ್ಬಸದಲ್ಲಿ ನರಳುತ್ತಿರುವ ಭಾರತದ ಸಾಂಸ್ಕೃತಿಕ ಸಂದರ್ಭದಲ್ಲಿ ನೋವುಂಡ ವರ್ಗದ ಯಾವುದೇ ದನಿ ಮೊದಲಿಗೆ ಎದೆ ತೆರೆದು ನುಡಿಯತೊಡಗಿದಾಗ ಈ ನೈತಿಕ ಸಿಟ್ಟು ಒಡಲಾಳದ ಕಿಡಿಯಾಗಿ ಮೂಡುವುದು ಸಹಜವಿದೆ.

ಮತ್ತೊಂದು ವಿಶೇಷವೆಂದರೆ ಶರಣನಾದ ಚೌಡಯ್ಯನಂಥವರಿಗೆ ಹೊರಗಣ ಕಟಕಿಗಳ ಜೊತೆಗೆ ಒಳಗಣ ಕುಹಕಗಳು ವೇಷಧಾರೀ ವರ್ತನೆಗಳು ಹಿಂಸೆಯಾಗಿ ಕಾಡಿಸಿರುವ ಸಾಧ್ಯತೆಗಳಿವೆ. ಅರುಹಿರಿಯರಾಗದ ಹಲವು ಜನ ಶರಣರನ್ನು ನೋಡಿ ಬಿಡುವುಡಿಯಲ್ಲಿ ಎರಡನರಿಯುವ ಸವಾಲು ಹಾಕುವ ಚೌಡಯ್ಯನ ನಿಲುವಿನಲ್ಲಿ ಕುಲವನ್ನು ಕುರಿತ ಅವನ ಸ್ಪಷ್ಟ ಅಭಿಪ್ರಾಯ ಕಾಣುತ್ತಿದೆ. ಇವನ ವಚನಗಳಲ್ಲಿ ಅನ್ಯಧರ್ಮದವರ ಆಚಾರ ವಿಚಾರಗಳನ್ನು ಕುರಿತ ಖಂಡನೆ ಬಂದಿರುವುದು ತೀರ ಕಡಿಮೆ, ಆದರೆ ಸ್ವಧರ್ಮಿಗಳ ನಡೆಗೆಟ್ಟ ನುಡಿಗೆಟ್ಟ ಬದುಕನ್ನು ಕುರಿತು ತುಂಬಾ ಖಾರವಾಗಿ ಮುಖಕ್ಕೆ ಉಗುಳಿದಷ್ಟು ನೇರವಾಗಿ ತೆಗಳುತ್ತಾನೆ. ಈ ಖಂಡನೆಯ ಹಿಂದೆ ತಾವು ಬಾಳುತ್ತಿರುವ ವಚನ ಧರ್ಮವೂ ಹತ್ತರೊಳಗಿನ ಹನ್ನೊಂದಾಗಬಾರದು ಎಂಬ ಕರುಳಾಳದ ಕಳಕಳಿ ಕಾಣುತ್ತದೆ. ನಡೆ ನುಡಿಗಳೊಂದಾಗದೆ ವೇಷದ ಮರೆಯಲ್ಲಿ ಭಾಷೆ ತಪ್ಪಿ ನಡೆವ ಇಂಥ ನೀಚರನ್ನು ಕಂಡು ಚೌಡಯ್ಯ ತುಂಬಾ ವ್ಯಗ್ರನಾಗುತ್ತಾನೆ. ಪರಮವಿರಕ್ತರು ಪಟ್ಟದ ಅಯ್ಯನವರು ಚರಮೂರ್ತಿಗಳು ಪರದೇಶಿಗಳು ಎಂದು ಕಾವಿ ಕುಪ್ಪಾಂಬರವ ಹೊದ್ದು, ಮಾತಿನಲ್ಲಿ ನೀತಿಯ ಸೇರಿಸುತ್ತಾ ಕಪಟದಲ್ಲಿ ಸಂಚರಿಸುವಂತಹ, ಶಿವಪಥಕ್ಕೆ ದೂರಾಗಿ ದುರಾಚಾರದಲ್ಲಿ ನಡೆದು ಸತ್ತುಹೋಗುವ ಜಡದೇಹಿ ಕಡುಪಾತಕ ಕತ್ತೆಹಡುಕರಿಗೆ ಮೂಗಸೀಳಿ ಮೆಣಸಿನ ಹಿಟ್ಟು ತುಪ್ಪವ ತುಂಬಿ ಪಡಿಹಾರಿ ಉತ್ತಣ್ಣಗಳೆಡದ ಪಾದುಕೆಯಿಂದ ಫಡಫಡನೆ ಹೊಡಿ ಎಂದು ನಿಜಶರಣ ಚೌಡಯ್ಯ ಆಗ್ರಹಿಸುತ್ತಾನೆ.

ಮತ್ತೊಂದು ವಿಶೇಷವೆಂದರೆ ಇವನು ಎಲ್ಲೂ ಮೇಲ್ವರ್ಗದ ವಚನಕಾರರನ್ನು ಕುರಿತು ಮತ್ತೆ ಮತ್ತೆ ನಮೋ ನಮೋ ಎಂದಿರುವ ಕೃತಕೃತ್ಯಭಾವವಾಗಲೀ ಧನ್ಯತಾ ಭಾವದಲ್ಲಿ ಹಾಡಿಹೊಗಳಿರುವುದಾಗಲಿ ಕಾಣುವುದಿಲ್ಲ.

ಓಂ ನಮಃ ಶಿವಾಯ ಎಂದು ನೀವು ನುಡಿಯುವಿರಿ
ನಾವು ಇಲ್ಲಿ ಉಂಟೆಂದು ಅರಿಯಿರಿ
ಆರು ಅಕ್ಷರದ ಕಡೆಯಲಿ ನಾನೂ ಬಸವಣ್ಣ ಎಂದೆ
ಗುರು ಅಂಬಿಗರ ಚೌಡಯ್ಯ.

ಬಸವನೇ ಭಕ್ತನು
ಪ್ರಭುದೇವರೇ ಜಂಗಮ
ಇಂತೆಂಬ ಭೇದವಿಲ್ಲವಯ್ಯ
ಅರಿವೇ ಗುರು ಗುರುವೇ ಪರಶಿವನು
ಇದು ತಿಳಿದವನೇ ಪರಂಜ್ಯೋತಿ
ಎಂದ ನಮ್ಮ ಅಂಬಿಗರ ಚೌಡಯ್ಯ

ಹೀಗೆ ಪ್ರಶ್ನೆಯ ನೆಲೆಯಲ್ಲಿ ವ್ಯಕ್ತಿತ್ವವನ್ನು ಗ್ರಹಿಸುವ ದೃಷ್ಟಿ ಈ ಅಂಬಿಗನಿಗಿರುವ ವಿಶೇಷ ಗುಣ. ಇದು ಉದ್ಧಟತನದ ವರ್ತನೆಯಲ್ಲ: ಸಾಧಕನಾದವನು ಸಿದ್ಧಿ ಪಡೆಯಲು ಒಡಮೂಡಿಸಿಕೊಳ್ಳಬೇಕಾದ ಛಲದ ಫಲ; ಪರಂಜ್ಯೋತಿ ಆಗಬೇಕು ಎಂಬ ಆತ್ಮಬಲದ ಪ್ರತೀಕ. ಪರಂಜ್ಯೋತಿ ಸ್ವರೂಪರಾಗಲು ಸಕಲರಿಗೂ ಸಾಧ್ಯ ಎಂಬ ವಿವೇಕದ ವಿಚಾರ.

ಚೌಡಯ್ಯನ ಬಹಳಷ್ಟು ವಚನಗಳಲ್ಲಿ ಪಡಿಹಾರಿ ಉತ್ತಯ್ಯನ ಹೆಸರು ಮತ್ತೆ ಮತ್ತೆ ಬಳಕೆಯಾಗಿದೆ. ಅದೂ ಆ ಪಡಿಹಾರಿಯು ಎಡದ ಪಾದರಕ್ಷೆ ತೆಗೆದುಕೊಂಡು ಭಾಷೆ ತಪ್ಪಿದ ಸ್ವಧರ್ಮಿಗಳಿಗೆ ಕಪಾಳ ಮೋಕ್ಷ ಕಾಣಿಸುವುದಕ್ಕೆ. ಉತ್ತಯ್ಯ ಪಡಿಹಾರಿ ಕಾಯಕ ಮಾಡಿಕೊಂಡಿದ್ದ ಗುಪ್ತ ಭಕ್ತ. ಕಾಯಕ ಜೀವಿಯಾದ ಈ ಪಡಿಹಾರಿಯ ಬಗ್ಗೆ ಅಂಬಿಗ ಚೌಡಯ್ಯನಿಗಿರುವ ಗೌರವ ಅಪಾರ. ಈ ಕಾರಣ ದಿಂದಲೇ ವೀರಶೈವರಾಗಿದ್ದೂ ಅಯೋಗ್ಯ ರೀತಿಯಲ್ಲಿ ನಡೆಯುವವರ ಕೆನ್ನೆಗೆ ಈ ಕಾಯಕ ಜೀವಿಯು ಎಕ್ಕಡದಿಂದ ಹೊಡೆಯುವ ಸಿಟ್ಟು ತೋರುತ್ತಾನೆ. ದಡ್ಡ ಶಿಖಾಮಣಿಗಳಿಗೆ ಬುದ್ಧಿವಂತರನ್ನು ತೋರಿಸಿ ಅವನ ಕಾಲಕೆಳಗೆ ನುಸಿ ಎಂದು ಹೇಳುವ ಜನಪದ ವಾಡಿಕೆಯಂತೆ ಈ ಹೋಲಿಕೆ ಬಳಕೆಯಾಗಿದೆ. ತಪ್ಪಿ ನಡೆದವ ಯಾರೇ ಆಗಿರಲಿ ಎಂಥವನೇ ಇರಲಿ ಹಿಡಿದು ನಿಲೆಹಾಕಿ ಪ್ರಶ್ನಿಸುವ ಒಡಲಾಳದ ನೈತಿಕ ಬಲದ ಬೆಂಕಿಗುಣ ಈ ಅಂಬಿಗನ ವಚನಗಳ ಮುಖ್ಯ ಗುಣ. ಈ ಬೆಂಕಿ ಕಸವನ್ನು ಸುಟ್ಟು ಕಾಳಿಕೆಯನ್ನು ಕಳೆದು ಅಟ್ಟು ಉಣ್ಣಿಸುವ ಗುಣದ್ದು. ತುಂಬು ಅಭಿಮಾನ ದಿಂದ ತನ್ನನ್ನು ತಾನು 'ನಿಜ ಶರಣ ಅಂಬಿಗರ ಚೌಡಯ್ಯ' ಎಂದು ಕರೆದುಕೊಳ್ಳು ತ್ತಾನೆ. ಈ ಹೆಗ್ಗಳಿಕೆಯ ಹಿಂದಿನ ನೈತಿಕತೆ ಪ್ರಶ್ನಿಸುವ ಗೆರೆ ಮೀರಿ ಆತ್ಮೀಯವಾಗಿ ಅರಿತುಕೊಳ್ಳುವ ಪರಿಗೆ ಒಳಗಾಗುವಂಥದ್ದು. ಹಾಗೆಯೇ ಇವನ ಈ ಸಿಟ್ಟಿನ ಮಾತುಗಳ ಹಿಂದೆ ಕೆಟ್ಟದ್ದನ್ನು ತಿರಸ್ಕರಿಸುವ ಅಲ್ಲದ್ದನ್ನು ಖಂಡಿಸುವ ಸಣ್ಣತನ ವನ್ನು ದೂರೀಕರಿಸುವ ಆತ್ಮಬಲವಿದೆ. ಈ ನೈತಿಕ ಬಲದ ಸ್ವರೂಪ ಶಕ್ತಿ ಅರ್ಥ ವಾಗಬೇಕಾದರೆ 'ಎಡಗಾಲಿನ ಎಕ್ಕಡದಲ್ಲಿ ಹೊಡೆವ' ಮಾತುಗಳನ್ನಾಡಿ ನಿಂದೆಗೆ ಗುರಿಯಾಗಿರುವ ಕವಿ ರಾಘವಾಂಕನ ಪ್ರಸಂಗವನ್ನು ಇಲ್ಲಿ ಪ್ರಸ್ತಾಪಿಸುವುದು ಅಗತ್ಯವಿದೆ.

ಸಿದ್ಧರಾಮ ಚಾರಿತ್ರವನ್ನು ಬರೆಯುವಾಗ ರಾಘವಾಂಕ ಸಿದ್ಧರಾಮನನ್ನು ಎರಡನೆಯ ಶಿವನೆಂದೂ ಅವನ ಹುಟ್ಟೂರಾದ ಸೊನ್ನಲಾಪುರವನ್ನು ಎರಡನೆಯ ಕೈಲಾಸವೆಂದೂ ವರ್ಣಿಸುತ್ತಾನೆ. ಮುಂದುವರಿದು ಇದನ್ನು ವಿರೋಧಿಸುವವರನ್ನು ಕುರಿತು

'ಪರವಾದಿ ಯಾರವನ ಶಿರದೊಳಿಳುಹುವೆನೆನ್ನ ವಾಮಪದ ಪಾದುಕೆಯನ್ನು' - ಎಂದು ಘೋಷಿಸುತ್ತಾನೆ. ರಾಘವಾಂಕ ಕನ್ನಡದ ಒಬ್ಬ ಮಹತ್ವಪೂರ್ಣ ಕವಿ. ಆದರೆ ಈ ಸನ್ನಿವೇಶದಲ್ಲಿ ಅವನ ಮತೀಯ ಆವೇಶ ಕವಿ ಪ್ರಜ್ಞೆಯನ್ನು ಹಿಂದಿಕ್ಕಿ ಉಚ್ಚಾಯಿಸಿ ನುಗ್ಗಿದೆ. ಮತೀಯತಾಮಸಾಂಶದ ಈ ಆಕ್ರೋಶಕ್ಕೆ ನೈತಿಕ ಬೆನ್ನೆಲುಬಿಲ್ಲ. ಚೌಡಯ್ಯ ತನ್ನ ವಚನಗಳಲ್ಲಿ ಖಂಡಿಸುವುದು ಪರವಾದಿಗಳನ್ನಲ್ಲ; ಒಂದು ಜೀವನ ಸಿದ್ಧಾಂತವನ್ನು ಒಪ್ಪಿಕೊಂಡ ಮೇಲೆ ಅದಕ್ಕೆ ಬದ್ಧವಾಗಿ ನಡೆಯದೇ ಹೋಗುವ ದುರಾಚಾರಿಗಳನ್ನು. ಈ ಹೋಲಿಕೆಯ ನೆಲೆಯಲ್ಲಿ ವಿವೇಚಿಸಿದಾಗ ಚೌಡಯ್ಯನ ಸಿಟ್ಟಿನ ಹಿಂದಿರುವ ನೈತಿಕ ಬಲದ ಸ್ವರೂಪ ಅರಿವಾಗುತ್ತದೆ.

ಚೌಡಯ್ಯ ನಂಬಿದ ಸಿದ್ಧಾಂತಕ್ಕೆ ಬದ್ಧನಾಗಿ ಶ್ರದ್ಧೆ ಪ್ರಾಮಾಣಿಕತೆಗಳಿಂದ ಬದುಕಿದ ಶರಣ.

> ಆರು ಲಿಂಗ ಮೂರು ಲಿಂಗವೆಂಬುದು
> ನಮಗುಳ್ಳುದೊಂದೆ ಲಿಂಗ
> ಒಂದು ಲಿಂಗದಲ್ಲಿ ಒಂದು ಮನ ಸಿಕ್ಕಿದಡೆ
> ಮರಳಿನ್ನೊಂದು ಲಿಂಗವ ನೆನೆಯಲಿಲ್ಲ
> ವೆಂದಾತನಂಬಿಗ ಚೌಡಯ್ಯ.

ಅವನ ಅಂತರಂಗದಲ್ಲಿ ನೆಲೆಮಾಡಿರುವ ತೊದಳಿಲ್ಲದ ನಂಬಿಕೆ ನಿಷ್ಠೆಯ ಸ್ವರೂಪವನ್ನು ಈ ವಚನ ಅನಾವರಣಗೊಳಿಸಿದೆ. ಇವನ ನಂಬಿಕೆ ಕುರುಡು ನಂಬಿಕೆಯಲ್ಲ. ವಸ್ತುಸ್ಥಿತಿಯನ್ನು ಅರಿತು ನಡೆಯುವ ಸಾಧಕನೊಬ್ಬನ ಜ್ಞಾನ ದೃಷ್ಟಿ ಇವನ ವಚನಗಳಲ್ಲಿ ಅಂತರ್ಗತವಾಗಿರುವ ಜೀವಶಕ್ತಿ.

> ಮಾತೇ ಸೂತಕವಾಗಿ ಸಂದೇಹ ಮಾಡುವಲ್ಲಿ
> ಅದೇತರಿಂದ ಒದಗಿದು ಕುರುಹು !
> ಶಿಲೆಯ ಪ್ರತಿಷ್ಠೆಯ ಮಾಡಿ ತನ್ನ ಒಲವರ ವಿಶ್ವಾಸದಿಂದ
> ಬಲಿಕೆಯನರಿವುದು ಆ ಶಿಲೆಯೋ ಮನವೋ ?
> ಎಂದನಂಬಿಗ ಚೌಡಯ್ಯ.

ಈ ಮೇಲಿನ ವಚನದಲ್ಲಿಯ ವಿಚಾರ ದೃಷ್ಟಿ ಅವನ ನಂಬಿಕೆ ಮತ್ತು ಸಾಧನೆಗಳ ಸ್ಥಿತಿ ಸ್ವರೂಪಗಳನ್ನು ತೋರಿಸುತ್ತದೆ. ನಡೆನುಡಿಗಳೊಂದಾದ ಅಂತರಂಗ ಬಹಿರಂಗ ಏಕವಾದ ಪಾರದರ್ಶಕ ಸ್ಥಿತಿಯ ಬದುಕು ಇವನದು. ಇಂಥ ನೆಲೆಯಲ್ಲಿ ನಿಂತ ಈ ಶರಣನಿಗೆ ನೆಲೆತಪ್ಪಿ ನಡೆವ ನುಡಿಗಳ್ಳರನ್ನು ಕಂಡಾಗ ಸಿಟ್ಟು ಬರುತ್ತದೆ. ಅಂಥ

ವರನ್ನು ಕಂಡಾಗ ನಿಷ್ಠುರವಾಗಿ ಖಂಡಿಸುತ್ತಾನೆ. ಚೌಡಯ್ಯನ ವಚನಗಳು ಶೂನ್ಯ ದಲ್ಲಿ ಸೃಷ್ಟಿಯಾದವಲ್ಲ; ಅವು ಪ್ರತಿಕ್ರಿಯಾತ್ಮಕ ಶಕ್ತಿಯಿಂದ ಉರಿಯುತ್ತಿವೆ. ಹೀಗೆ ಉರಿಯುವ ಕ್ರಿಯೆಗೆ ಅವನ ಸುತ್ತಮುತ್ತ ಇದ್ದ ಶರಣ ಜಗತ್ತು ಕಾರಣ ವಾಗಿದೆ.

ನಂಬಿಗಿಲ್ಲದ ಲಿಂಗದಿ
ನಂಬಿಗಿಲ್ಲದ ಜಂಗಮದಿ
ನಂಬಿಗಿಲ್ಲದ ತೀರ್ಥ ಪ್ರಸಾದದಿ
ಅಂಬಲಿಯು ಕೊಂಡಂತೆ
ಇಂಥವರ ನಂಬಲಾಗದು
ಎಂದ ನಮ್ಮ ಅಂಬಿಗರ ಚೌಡಯ್ಯ

ಎಂದು ಖಂಡಿಸುತ್ತಾನೆ. ನಂಬಿಗಿಲ್ಲವ ಲಿಂಗ ಜಂಗಮ ತೀರ್ಥ-ಪ್ರಸಾದಗಳ ಕಡೆ ಅಂಬಲಿಯು ಕೊಂಡಡೆ ಅದು ಅಶನಾರ್ಥವಾಗುತ್ತದೆಯೋ ಹೊರತು ನೆಲೆಯರಿತು ನಡೆವ ನಂಬಿಗೆಯು ನಿಜವಾಗುವುದಿಲ್ಲ. ಭೋಗ ಜೀವನಕ್ಕೆ ದಾಸರಾದ ವೇಷಧಾರಿ ಜಂಗಮರನ್ನು ಕುರಿತು

ಈಶ ಲಾಂಛನವ ತೊಟ್ಟು
ಮನ್ಮಥ ಲಾಂಛನವ ತೊಡಲೇತಕ್ಕೆ ?
ಇದು ನಿಮ್ಮ ನುಡಿ ನಡೆಗೆ ನಾಚಿಕೆಯಲ್ಲವೇ ?

ಎಂದು ಪ್ರಶ್ನಿಸುತ್ತಾನೆ. ಭೋಗವನ್ನು ಗೊಂದಣವೆಂದು ಕರೆದು ಈ ಗೊಂದಣ ಘನಲಿಂಗದ ಮೆಚ್ಚಲ್ಲ ಎಂದು ನಿಷ್ಠುರವಾಗಿ ನುಡಿಯುತ್ತಾನೆ.
ಭೋಗ ಎಂಬುದು ಆಸೆಗೆ ದಾಸನಾಗಿರುವುದು. ಆಸೆ ಎಂಬುದು ಅನಂತ ದುಃಖ ಗಳನ್ನು ತರುವುದು.

ಆಶೆಯುಳ್ಳಾತನೊಬ್ಬರಾಧೀನದಲ್ಲಿಪ್ಪನು
ಆಶೆಯ ಮನೆಯ ಕೊನೆಯರಿದಾತ
ಕೈಲಾಸದಾಚೆಯಲ್ಲಿಪ್ಪಾತನೆಂದಾತ
ಅಂಬಿಗ ಚೌಡಯ್ಯ.

ಈ ವಚನಕಾರನ ಅಭಿಪ್ರಾಯವನ್ನು ನೇರ ಮಾತುಗಳಲ್ಲಿ ಹೇಳಿರುವಂತೆ ಕಂಡರೂ ಇಲ್ಲಿಯ ಚಿಂತನೆ ವಿಶಿಷ್ಟವಾಗಿದೆ. ಆಸೆ ಕೆಟ್ಟದ್ದು. ಆಸೆಗೆ ಬಲಿಬಿದ್ದವನು ಅದರ

ಪೂರೈಕೆಗಾಗಿ ಹಲವರ ದಾಸರ್ನಬೇಕಾಗುತ್ತದೆ. ಈ ದಾಸ್ಯ ಆತ್ಮ ಗೌರವವನ್ನು ಹಾನಿಗೊಳಿಸುತ್ತದೆ. ಆದ್ದರಿಂದ ಆಸೆಯನ್ನು ಗೆಲ್ಲುವುದು ಎಂದರೆ ಮನದ ಮಿತಿಯನ್ನು ನಿಯಂತ್ರಿಸುವುದು. ಮನವನ್ನು ಗೆಲ್ಲುವ ಕ್ರಿಯೆಯೇ ಮಹತ್ತರ ಪೂಜೆ. ಇದು ಕೈಲಾಸ ಗಳಿಕೆಗಿಂತ ಹೆಚ್ಚಿನ ಸಾಧನೆ ಎನ್ನುತ್ತಾನೆ ಚೌಡಯ್ಯ. ಇವನ ಆಲೋಚನೆ ವಾಸ್ತವದ ನೆಲೆಯಲ್ಲಿ ಅರಳಿದ್ದು; ಬದುಕು ಮತ್ತು ವ್ಯಕ್ತಿ ಇವುಗಳ ಪರಸ್ಪರ ಆರೋಗ್ಯಪೂರ್ಣ ಹೊಂದಾಣಿಕೆಗೆ ಸಂಬಂಧಿಸಿದ್ದು. ಈ ನೆಲೆಯ ಶುದ್ಧ ಜೀವನವೇ ನಿಜವಾಗಿ ದೇವರ ಸಾಕ್ಷಾತ್ಕಾರ ಎಂಬುದು ಇವನ ತಿಳಿವಳಿಕೆ.

> ತನ್ನುವ ಮರೆದು ದೇವರ ಕಂಡೆನೆಂಬ ಕಾರಣ
> ಹರಿಸುರ ಬ್ರಹ್ಮಾದಿಗಳೆಲ್ಲರೂ ತಲೆಕೆಳಗಾಗ ಹೋದರು
> ಆ ದೇವರ ಮರೆದು ತನ್ನುವನರಿದುದುಂಟಾದಡೆ
> ಆ ತಾನೆ ದಿಟವೆಂದನಂಬಿಗ ಚೌಡಯ್ಯ.

ಸಾಧಕನಾದವನಿಗೆ ತನ್ನನು ತಾನು ಅರಿಯುವ ಕ್ರಿಯೆ ಮುಖ್ಯ. ತನ್ನನ್ನು ತಾನು ಗೆಲ್ಲದೆ ದೇವರನ್ನು ಕಾಣುತ್ತೇನೆ ಎಂಬ ಭ್ರಮೆಯಲ್ಲಿ ಬದುಕನ್ನು ವ್ಯರ್ಥಗೊಳಿಸುವುದನ್ನು ಚೌಡಯ್ಯ ನೇರವಾಗಿ ತಿರಸ್ಕರಿಸುತ್ತಾನೆ. ಕಾಣದ ದೇವರ ಸಾಕ್ಷಾತ್ಕಾರದ ವ್ಯರ್ಥಾಲಾಪಕ್ಕಿಂತ 'ತನ್ನುವನರಿದುದುಂಟಾದಡೆ ತಾನೆ ದಿಟ' ಎಂಬ ಇವನ ಮಾತು ವೈಚಾರಿಕ ನೆಲೆಗೆ ಮುಖ ಮಾಡಿದ ಮಾತು. ತನ್ನ ವಚನಗಳ ಅಂಕಿತದಲ್ಲಿ ಯಾವ ಇಷ್ಟದೈವದ ಹೆಸರನ್ನೂ ಸೇರಿಸದೆ ತನ್ನ ಹೆಸರನ್ನೇ ಸೇರಿಸಿಕೊಂಡಿರುವ ಅವನ ರೀತಿಯೇ ಅವನ ನಿಲುವಿಗೆ ಭಾಷ್ಯವಾಗಿದೆ.

ಚೌಡಯ್ಯನ ದೃಷ್ಟಿಯಲ್ಲಿ ಪೂಜೆ ಎಂದರೆ ವ್ಯಥಾ ಸಮಯ ಹಾಳು ಮಾಡಿಕೊಳ್ಳುವುದಾಗಲೀ, ಪೂಜೆಯ ನೆಪದಲ್ಲಿ ಸಾಮಗ್ರಿಗಳನ್ನು ವ್ಯರ್ಥಮಾಡುವುದಾಗಲಿ ಅಲ್ಲ. ಸಮಯ ಸಾಮಗ್ರಿ ಎರಡೂ ಸದುಪಯೋಗವಾಗಬೇಕು ಇದು ಇವನ ಅಭೀಪ್ಸೆ. ಈ ಕಾರಣಕ್ಕಾಗಿ ಇವನು ಸ್ಥಾವರದ ಪೂಜಕನಲ್ಲ, ಜಂಗಮದ ಸಹಾಯಕ.

> ಉದಯದಲೆದ್ದು ಪತ್ರೆಪುಪ್ಪಗಳಿಗೆ ಹೋಗುವ
> ಅಣ್ಣಗಳು ನೀವು ಕೇಳಿರೋ
> ಹಸಿಯ ತೊಪ್ಪಲನೆ ತಂದು
> ಆ ದೇವರ ಮಸ್ತಕದ ಮೇಲೊಟ್ಟುವ
> ಆ ತೊಪ್ಪಲನೆ ತಂದು ಬಿಸಿ ಮಾಡಿ
> ಪಶುಪತಿ ಎಂಬ ಜಂಗಮಕ್ಕೆ ನೀಡಿದೊಡೆ
> ಆ ಜಂಗಮದ ಬಸಿರು ತುಂಬಿದೊಡೆ
> ಲಿಂಗದ ಹಸಿವಡಗಿತೆಂದಾತ ನಮ್ಮ ಅಂಬಿಗರ ಚೌಡಯ್ಯ.

ಹಸಿಯ ತೊಪ್ಪಲನ್ನು ತಾನು ಮಸ್ತಕದ ಮೇಲೊಟ್ಟಿ ಕಸವಾಗಿಸುವ ಕ್ರಿಯೆಯನ್ನು ಟೀಕಿಸುತ್ತಾನೆ. ಕಸವಾಗುವುದನ್ನು ರಸವಾಗಿಸಿ ಬಸಿರನೂಡಿಸಿ ಜೀವ ಪೋಷಕವಾಗಿಸುವ ದೃಷ್ಟಿ ವಿಚಾರವಾದಿಗಳ ಉಪಯುಕ್ತತಾ ದೃಷ್ಟಿ. ಹಸಿದ ಜಂಗಮನಿಗೆ ಉಣಲಿಕ್ಕಿ ಸಂತೋಷ ಪಡುವ ಈ ಮನೋಧರ್ಮದಲ್ಲಿ ಕ್ರಿಯಾ ಶುದ್ಧಿಯನ್ನು ಕಾಣಬಹುದು. ಹಸಿಯ ತೊಪ್ಪಲು-ಮಸ್ತಕ ಈ ಶಬ್ದ ಬಳಕೆಯ ಹಿಂದಿನ ಭಾವನೆ ಗಮನಾರ್ಹವಾದುದು. ಧಾರ್ಮಿಕ ಪರಿಸರದಲ್ಲಿ ಮೂರ್ತಿಪೂಜಕರಾದವರಿಗೆ ಈ ಶಬ್ದಗಳು ಮೂರ್ತಿ ಭಂಜಕ ಭಾವದಷ್ಟೇ ಅಪ್ರಿಯವಾಗಿ ಕೇಳಿಸಬಹುದು.

ದೇಹಾರವ ಮಾಡುವಣ್ಣಗಳಿರಾ
ಒಂದು ತತ್ತು ಆಹಾರವನಿಕ್ಕಿರೇ
ದೇಹಾರಕ್ಕೆ ಆಹಾರವೇ ನಿಚ್ಚಣಿಕೆ
ದೇಹಾರವ ಮಾಡುತ್ತ ಆಹಾರವನಿಕ್ಕದಿರ್ದಡೆ
ಆ ಹರನಿಲ್ಲೆಂದನಂಬಿಗ ಚೌಡಯ್ಯ.

ದೇವಸ್ಥಾನವನ್ನು ಕಟ್ಟುವ ಪೂಜೆಯನ್ನು ಮಾಡುವ ಮೊದಲು ಹಸಿವಿಗೆ ಅನ್ನವನ್ನಿಕ್ಕುವ ಕಾಯಕ ಮಾಡುವುದು ಮುಖ್ಯ. ದೇಹಾರಕ್ಕೆ ಆಹಾರವೇ ನಿಚ್ಚಣಿಕೆ ಎಂಬ ಮಾತು ಅನ್ನದ ಮಹತ್ವವನ್ನು ಹೇಳುತ್ತಿದೆ. ಹಸಿವು ತಣಿದ ಮೇಲೆ ಮಿಕ್ಕೆಲ್ಲ. ಹಸಿವಿನ ಲೋಕದಿಂದ ಬಂದ ಶರಣನ ಅಂತರಂಗದ ನುಡಿ ನೆತ್ತರು ಈ ವಚನ. ದೇಹಾರದ ಮಾಡುತ್ತ ಆಹಾರವನಿಕ್ಕದಿರ್ದಡೆ ಆ 'ಹರ' ನಿಲ್ಲ. ಇದು ನಿತ್ಯ ಸತ್ಯ. ಆಹಾರ ಮೊದಲು ಆ–ಹರ ನಂತರ. ಹೊಟ್ಟೆಗೆ ಹಿಟ್ಟಿಲ್ಲದಿದ್ದಾಗ ಜುಟ್ಟಿಗೆ ಮಲ್ಲಿಗೆ ಹೂವೇ ?

ಹೊಡವಡಲೇಕೆ ಹಿಡಿದು ಪೂಜಿಸಲೇಕೆ
ಎಡೆಯಾಡಲೇಕೆ ದೇಗುಲಕ್ಕಯ್ಯಾ ?
ಬಡವರಂಧಕರಿಗೆ ಒಡಲಿಗನ್ನವನಿಕ್ಕಿದಡೆ
ಹೊಡವಂಟನಾತ ಮೂರುಲೋಕಕ್ಕೆ.
ಇದೇ ಬಡವರಂಧಕರಿಗೆ ಒಡಲಿಗನ್ನವನಿಕ್ಕದಿದ್ದಡೆ
ಹೊಡವಡಲಿಕೆ ಹುರುಳಿಲ್ಲವೆಂದನಂಬಿಗ ಚೌಡಯ್ಯ.

ರೊಟ್ಟಿ ಎಂಬುವುದೇ ಜಾಗಟೆ
ಮೆಣಸಿನ ಕಾಯಿ ಎಂಬುವುದೆ ತೀರ್ಥಗಿಂಡಿ
ಬದನೆಕಾಯಿ ಎಂಬುದೇ ಲಿಂಗ
ಹರಕಾಗಲಿ ಮುರಕಾಗಲಿ ಎಣ್ಣೆಹೋಳಿಗೆಯೆ ಲೇಸು !
ಉದುರು ಅನ್ನ ತುಪ್ಪ ತಟತಟಗು ಸಾರು
ತೃಪಾತುರಿಯಿಂದ ನಮ್ಮ ವೀರ ಅಂಬಿಗರ ಚೌಡಯ್ಯ.

ಮೇಲಿನ ಎರಡೂ ವಚನಗಳಲ್ಲಿ ಅನ್ನದ ಮಹತ್ವವನ್ನು ಕುರಿತ ಅಭಿಪ್ರಾಯ ನೇರ ವಾಗಿ ಪ್ರಭಾವಿಯಾಗಿ ಅಭಿವ್ಯಕ್ತಗೊಂಡಿದೆ. ಪೂಜೆಮಾಡುವ ಕ್ರಿಯೆ ಬೂಟಾಟಿಕೆ ಯಾಗದೆ ಸಂಸ್ಕೃತಿಯ ಸಲ್ಲಕ್ಷಣವಾಗುವುದು ಮಾನವೀಯ ಕರುಳ ತುಡಿತ ಮಿಡಿತದ ಕ್ರಿಯಾಶೀಲ ನೆಲೆಯಿಂದ ಮೂಡಿದಾಗ. ಮಾತಿನಲ್ಲಿ ಬೆಣ್ಣೆ ಕಂಕುಳಲ್ಲಿ ದೊಣ್ಣೆ ಎನ್ನುವ ಹಾಗೆ ಪೂಜೆಯಲ್ಲಿ ಗೌರವ ಓಜೆಯಲ್ಲಿ ನಿರ್ದಯಿಯಾದರೆ ಆ ಪೂಜೆ ಹೆಣಕ್ಕೆ ಮಾಡಿದ ಸಿಂಗಾರ. ಹಸಿದವರಿಗೆ ಅನ್ನವನಿಕ್ಕದ ಧರ್ಮಾಚರಣೆ ಅಯೋಗ್ಯ ಪಡಾವಳಿ. ಅಂತೆಯೇ ಹೊಡೆಪಡಲಿಕೆ ಹುರುಳಿಲ್ಲ ಎನ್ನುತ್ತಾನೆ ಚೌಡಯ್ಯ. ಬಡವರ ಭಕ್ಷ್ಯಗಳನ್ನು ಪೂಜಾ ಸಾಮಗ್ರಿಗಳಿಗೆ ಹೋಲಿಸಿ ತನ್ನ ತೃಪಾತುರತೆ ಯನ್ನು ಮೆರೆದಿರುವ ಅಂಬಿಗನ ಭಾವ ಹಸಿವಿನ ಲೋಕದ ಕರುಳನಾಡ. ಅನ್ನದೈವ ಕ್ಕಿಂತ ಇನ್ನು ದೈವವದುಂಟೆ? ಈ ಕಾರಣದಿಂದಲೇ ಮಿಕ್ಕಿನ ದೈವಗಳನ್ನು ಜಿಕ್ಕಿಕ್ಕಿಟ್ಟುಕೊಳ್ಳದಂತೆ. ತನ್ನ ಅಂತರಂಗದ ನಿಷ್ಠುರ ಸತ್ಯವನ್ನು ಸಾರುತ್ತಾನೆ.

ಮಾಯೆಯ ಬಸುರಲ್ಲಿ ಬಂದಾತ ಮಹೇಶ;
ದೇವಕಿಯ ಬಸುರಲ್ಲಿ ಬಂದಾತ ವಿಷ್ಣು;
ಹೂವಿನ ಬಸುರಲ್ಲಿ ಬಂದಾತ ಬ್ರಹ್ಮ;
ಮರುತ ದೇವಿಯ ಬಸುರಲ್ಲಿ ಬಂದಾತ ಹಾರುವ;
ಇವರು ದೇವರೆಂದು ನಂಬಿ ಪೂಜಿಸಿದರೆ ಭವ ಅಳಿಯದು
ಮುಕ್ತಿಯಾಗದೆಂದಾತನಂಬಿಗ ಚೌಡಯ್ಯ.

ತ್ರಿಮೂರ್ತಿಗಳ ಜೊತೆಗೆ ಭೂದೇವತೆ ಬ್ರಾಹ್ಮಣನನ್ನೂ ಕೂಡಿಸಿ ಇವರನ್ನು ದೇವ ರೆಂದು ನಂಬುವ ನಂಬಿಕೆ ಮೂಲವನ್ನೇ ತಿರಸ್ಕರಿಸುತ್ತಾನೆ. ವ್ಯರ್ಥ ಎನ್ನುತ್ತಾನೆ. ಚೌಡಯ್ಯನ ಪ್ರಕಾರ ಇಷ್ಟಲಿಂಗವೆಂದರೆ ಇಷ್ಟದೈವವಲ್ಲ. ದೈವೀ ಭಾವದಲ್ಲಿ ಕಾಯಕ ಮುಖಿಯಾದ ಮನಸ್ಸು. ಅಂಗದ ಮೇಲಿನ ಲಿಂಗವಲ್ಲ, ದೇಹದೊಳಗಿನ ಜೀವಭಾವ. ಪಡೆಯಬೇಕಾದ್ದು ದೈವೀ ಗುಣ ಸ್ವರೂಪವನ್ನು. ಹೀಗಾಗಿ ಉಣಲಿಕ್ಕೆ ಸಂತೋಷ ಪಡುವ ಮನಸ್ಸಿನ ತೃಪ್ತಿಯನ್ನು ನಿಜವಾದ ಪೂಜೆ, ಲಿಂಗದ ಹಸಿವನಡಗಿಸಿದ ಪೂಜೆ ಎನ್ನುತ್ತಾನೆ. ಹೀಗಾಗದೆ ಹೋದ ಪೂಜೆ ಡಾಂಭಿಕ ಪೂಜೆ. ಅಂಥ ಪೂಜೆ ಮಾಡಿದ ಭಕ್ತನನ್ನು ಹೀಯಾಳಿಸುತ್ತಾನೆ.

ಕಲ್ಲದೇವರ ಪೂಜೆಯ ಮಾಡಿ
ಕಲಿಯುಗದ ಕತ್ತೆಗಳಾಗಿ ಹುಟ್ಟಿದರು
ಮಣ್ಣ ದೇವರ ಪೂಜಿಸಿ ಮಾನ ಹೀನರಾದರು
ಮರನ ದೇವರೆಂದು ಪೂಜಿಸಿ ಸ್ವರ್ಗಕ್ಕೇರದೇ ಹೋದರು
ಜಗದ್ಭರಿತವಾದ ಪರಶಿವನೊಳಗೆ ಕಿಂಕರನಾದ
ಶಿವಭಕ್ತನೆ ಶ್ರೇಷ್ಠನೆಂದಾತ ನಮ್ಮ ಅಂಬಿಗರ ಚೌಡಯ್ಯನು.

ಕಲ್ಲು ಮಣ್ಣು ಮರಗಳನ್ನು ದೇವರ ಪ್ರತೀಕವಾಗಿಸಿಕೊಂಡು ಪೂಜಿಸುವುದು ಎಂದಿನಿಂದಲೂ ಇರುವ ರೂಢಿ. ಈ ರೂಢಿಯನ್ನು ಹಲವು ಜನ ವಚನಕಾರರು ಟೀಕಿಸಿದ್ದಾರೆ. ಚೌಡಯ್ಯನ ವಚನಗಳಲ್ಲಿ ಈ ಟೀಕೆ ತುಂಬಾ ಹರಿತವಾಗಿದೆ. ಅಲ್ಲದೆ ಈ ಟೀಕೆ ಕೇವಲ ಬಾಯಿ ಮಾತಿನ ಟೀಕೆಯಾಗದೆ ವೈಚಾರಿಕ ಅಂಶದ ಕಡೆಗೆ ಬೇರು ಚಾಚಿರುವ ಆಲೋಚನಾ ಎಳೆಯಿಂದ ಕೂಡಿದೆ. ಯಾವುದೇ ದೈವದ ಹೆಸರನ್ನು ತನ್ನ ವಚನ ರಚನೆಗೆ ಅಂಕಿತವಾಗಿಟ್ಟುಕೊಳ್ಳದೆ, 'ಅಂಬಿಗ' ಕಾಯಕದ ವಿಶೇಷಣ ದೊಂದಿಗ ತನ್ನ ಹೆಸರನ್ನೇ ಅಂಕಿತವಾಗಿಸಿಕೊಂಡಿರುವ ನಿಲುವೇ ಅವನ ಚಿಂತನೆಯ ದಿಕ್ಕನ್ನು ತೋರಿಸುತ್ತಿದೆ. ಕಾಯಕವನ್ನೆ ಪೂಜೆಯೆಂದು ಭಾವಿಸಿ ಬಾಳಿದ ನಿಜ ಶರಣ ಚೌಡಯ್ಯ. ಜಗದ್ಭರಿತನಾದ ಪರಶಿವನಲ್ಲಿ ಕಿಂಕರನಾಗುವುದೆಂದರೆ ಬದುಕಿನಲ್ಲಿ ತೊಡಗಿಕೊಳ್ಳುವುದು; ಕಾಯಕ ಜೀವಿಯಾಗುವುದು. ಪರಶಿವನ ಜಗದ್ಭರಿತ ಭಾವಕ್ಕೂ ಅಣುರೇಣು ತೃಣ ಕಾಷ್ಠಗಳಲ್ಲಿ ನೀನಿಪ್ಪೆ ಎಂಬ ಅರಿವಿಗೂ ಇರುವ ಅರ್ಥಸಮಾನತೆಯನ್ನು ಗ್ರಹಿಸಿದಾಗ ಜಗದ್ಭರಿತ ಪದದ ಅರ್ಥಬಾಹುಳ್ಯ ಅರಿವಾಗುತ್ತದೆ. ಬದುಕಿನ ಸರ್ವವ್ಯಾಪೀ ಶಕ್ತಿ ಆ ಪರಶಿವಭಾವ ಎಂಬುದು ಚೌಡಯ್ಯನ ಅರಿವು. ಪರಶಿವ ಜಗತ್ತನ್ನು ತುಂಬಿಕೊಂಡವನು ಎಂಬ ಅರಿವಿನಲ್ಲಿ ನಿಸರ್ಗ ಮತ್ತು ಬದುಕಿನ ಅಖಂಡತ್ವಗಳೇ ಹೊಳೆಯುತ್ತವೆ. ಇವುಗಳಿಗೆ ಕಿಂಕರನಾಗುವುದೆಂದರೆ ಇವುಗಳಿಗೆ ವಿರುದ್ಧವಾಗದಂತೆ ನಡೆದುಕೊಳ್ಳುವುದು. ಬದುಕಿಗೆ ಮುಖಿವಾಗುವುದು; ಜೀವಪರವಾಗುವುದು. ಇಂಥ ಬಾಳನ್ನು ನಡೆಸುವಾತ ಮನುಷ್ಯಶ್ರೇಷ್ಠನಾಗುತ್ತಾನೆ. ಇದು ಅಂಬಿಗರ ಚೌಡಯ್ಯ ತನ್ನ ವಚನಗಳಲ್ಲಿ ವ್ಯಂಜಿಸುವ ಬಾಳಿನ ನೋಟ.

ಶರಣಸತಿ ಲಿಂಗಪತಿ—ಎಂಬ ಭಾವದ ಭಕ್ತಿ ವಚನಕಾರರಲ್ಲಿ ಬಹಳ ಹೆಸರಾದ ಭಕ್ತಿ ಮಾರ್ಗ. ಇದು ಅಕ್ಕನಿಂದ ಮೊದಲಾಗಿ ಹಲವರಲ್ಲಿ ಹರಿದಂತೆ ಬೆಳೆದು 'ಮಧುರ ಭಾವದ ಭಕ್ತಿ' ಎಂದು ಕೊಂಡಾಟಕ್ಕೆ ಒಳಗಾಗಿದೆ. ಆದರೆ ಚೌಡಯ್ಯ ದ್ವೈತ ಭಾವದ ಇಂಥ ಭಕ್ತಿ ಪ್ರದರ್ಶನವನ್ನು ನಿಷ್ಠುರವಾಗಿ ಖಂಡಿಸುತ್ತಾನೆ.

ಶರಣಸತಿ ಲಿಂಗಪತಿ ಎಂಬರು
ಶರಣ ಹೆಣ್ಣಾದ ಪರಿಯಿನ್ನೆಂತು ?
ಲಿಂಗ ಗಂಡಾದ ಪರಿಯಿನ್ನೆಂತು ?
ನೀರು ನೀರ ಕೂಡಿ ಬೆರೆದಲ್ಲಿ ಭೇದಿಸಿ ಬೇರೆ ಮಾಡಬಹುದೆ ?
ಗಂಡು ಹೆಣ್ಣು ಸಂಯೋಗವಾದಲ್ಲಿ
ಆತುರ ಹಿಂಗಿ ಘಟ ಬೇರಾಯಿತು
ಶರಣಸತಿ ಲಿಂಗಪತಿ ಎಂಬ ಮಾತು ಮೊದಲಿಗೆ ಮೋಸ
ಲಾಭಕ್ಕಧೀನ ವುಂಟೆ ? ಎಂದನಂಬಿಗ ಚೌಡಯ್ಯ.

ಕಾಯಕವನ್ನು ಪೂಜೆ ಎಂದು, ಆತ್ಮತೃಪ್ತಿಯ ಬದುಕನ್ನು ದೇವರ ಸಾಕ್ಷಾತ್ಕಾರ ಎಂದು ಭಾವಿಸಿದ ಚಿಂತಿಸಿದ ಇವನಿಗೆ ಸಹಜವಾಗಿ ದೈವತ್ವವೆಂದರೆ ಭಕ್ತನಾದವನು ನಡೆದುಕೊಂಡಂತೆ ಪಡೆದುಕೊಳ್ಳುವ ಪೂರ್ಣತ್ವ. ಇದು ಬೆರಸಿ ಭೇದಿಸಲರಿಯದ ಭಾವದ್ದು. ಹಾಗೆಂದೇ ನೀರುನೀರ ಕೂಡಿ ಬೆರೆದಲ್ಲಿ ಭೇದಿಸಿ ಬೇರೆ ಮಾಡಬಹುದೆ ? ಎನ್ನುತ್ತಾನೆ. ಶರಣ ಸತಿಯಾಗಿ ಲಿಂಗಪತಿಯಾಗಿ ಕೂಡಿದಾಗ ಕೂಡಿದ ಆತುರ ಕಳೆದ ಮೇಲೆ ದೇಹ ಬೇರಾಗಲೇ ಬೇಕಲ್ಲ ? ಚೌಡಯ್ಯನ ಈ ಸತ್ಯಾನ್ವೇಷಕ ನಿಷ್ಠುರ ದೃಷ್ಟಿ ದ್ವೈತದ ನೆಲೆಯ ಮೋಸ ವಂಚನೆಯನ್ನು ನೇರವಾಗಿ ಉಗ್ರವಾಗಿ ಬಯಲಿಗೆಳೆಯುತ್ತಿದೆ. ಭಾಷೆಯ ನೆಲೆಯ ಅಮೂರ್ತ ಅಧ್ಯಾನಗಳಿಗಿಂತ ನಡೆಯ ನೆಲೆಯ ಮೂರ್ತ ಬದುಕು ಮುಖ್ಯ. ಇದರ ಕಡೆಗೆ ಅಂದರೆ ಕಾಯಕದ ಮಹತ್ವದ ಕಡೆಗೆ ಬದುಕು ಹಸನಾಗುವುದರ ಕಡೆಗೆ ಇವನ ಆಲೋಚನೆ ಭಾವನೆಗಳು ಹರಿದಿವೆ. ಈ ಭಾವನೆ ಆಲೋಚನೆಗಳಿಗೆ ತಕ್ಕ ಮೈಯಾಗಿ ಭಾಷೆ ಮಿಡಿದಿದೆ.

ಲಲಿತಾ ಕೆರಿಮನಿ

## ಎರಡು ಹನಿಗವನಗಳು

### ಬೆಳ್ಳಿ ಬಂಗಾರ

ಮಾತು ಬೆಳ್ಳಿ ಮೌನ ಬಂಗಾರ.
ನಾನು ಬೆಳ್ಳಿ
ನನ್ನವರು ಬಂಗಾರ.

### ವಿಚಿತ್ರ ಬಯಕೆ

ಎಲ್ಲರೂ ಹಡೆಯ ಬಯಸಿದರೆ
ಮಗನನ್ನು,
ಕೆಂಪು ದೀಪದ ಬಸುರಿ
ಹಡೆಯ ಬಯಸುತ್ತಾಳೆ ಮಗಳನ್ನು.

* ಸಂಪದಾ (೧೯೮೨) ಕವನ ಸಂಕಲನದಿಂದ.

# ಡಿಸೆಂಬರ್ ೬, ೧೯೯೨

ಏನು ಇವತ್ತಿನ
ತಾಜ ಸುದ್ದಿ ;
ಮಸೀದಿ ನೆಲಸಮವಾಯ್ತು;

ಕೇಳಿದೆ ಕೇಳಿದ್ದೆ
ಆಲ್ ಇಂಡಿಯಾ ರೇಡಿಯೋದಲ್ಲಿ;
ಮತ್ತೇನು ಸುದ್ದಿ;
ಸಾವಿರಾರು ಜನರು ಕೊಲ್ಲಲ್ಪಟ್ಟರು;
ಹಿಂದುಗಳೆಷ್ಟು
ಎಷ್ಟು
ಮುಸ್ಲಿಮರು ?
ಕ್ಷಮಿಸಿ
ಬಿಬಿಸಿಯಲ್ಲಿ ಹೇಳಲಿಲ್ಲ.

'ಬಿಸ್ಮಿಲಖಾನರ ಶಹನಾಯಿ
ಕಳೆದು ಹೋಯ್ತು
ಅಲ್ಲರಖರ ತಬಲದ ಚರ್ಮ ಸಿಗಿದರು
ಅಮ್ಜದ್ ಅಲಿಖಾನರ ಸರೋದ್‌ನ
ತಂತಿಯನ್ನು ಹರಿದೆಸೆದರು
ಮಿರ್ಜಾಗಾಲೀಬನ ಘಜಲನ್ನು
ಸುಟ್ಟ ನಾತ ಹಬ್ಬಿತ್ತು
ಮಲ್ಲಿಕಾರ್ಜುನ ಮನ್ಸೂರರ
ಎದೆಯಲ್ಲಿರುವ
ಬಡನವಾಲ್ ಖಾನರಿಗೆ ಕಲ್ಲು ಹೊಡೆದರು ...'

ಎಲ್ಲಿ, ಎಲ್ಲಿ
ಪ್ರಸಾರವಾಯ್ತು,
ನಾನು ಕೇಳಲಿಲ್ಲ, ಓದಲಿಲ್ಲ !
ಸುತ್ತ ಕತ್ತಲ ಗೋಡೆ

ಕಟ್ಟಿದ ಮೇಲೆ
ಬೆಳಕು ಎಲ್ಲಿ ಮುದುಡಿ ಮಲಗಿದೆ ?
ಕಣ್ಣು-ಕಿವಿಗಳ ಹೃದಯ ಕಿತ್ತ ಮೇಲೆ
ಹೃದಯದ ಕಣ್ಣು ಕಿವಿ ಸತ್ತ ಮೇಲೆ ?

## ಬಸವರಾಜ ಕುಂಬಾರ

# ಕೋಮು-ದಳ್ಳುರಿ

ದೇಶದ ತುಂಬ
ಸೈನಿಕರು ಬಂದೂಕ ಹಿಡಿದು
ಗಸ್ತು ಹೊಡೆಯುತ್ತಿದ್ದಾರೆ;
ಕಟ್-ಕಟ್ ಬೂಟಿನ ಸಪ್ಪಳ
ಚಾಕು-ಚೂರಿ-ಮಾತನಾಡಹತ್ತಿವೆ.

ಹದ್ದು-ಕಾಗೆಗಳು
ರಾರಾಜಿಸತೊಡಗಿವೆ, ಮಂದಿರ-
ಮಸೀದೆಗಳಲಿ, ಸುಗ್ಗಿಯ ಹಿಗ್ಗಿನಲಿ;
ನಿತ್ಯ ರಂಗೋಲಿ ಹಾಕುವ ಸುಮಂಗಲೆಯರು
ಮಾಂಸದ-ಮುದ್ದೆಗಳಾಗಿ
ಮೂಲೆ ಹಿಡಿದು ಕೂತಿದ್ದಾರೆ.

ನಿತ್ಯ ಉಲಿಯುವ
ಗಿಳಿ-ಕೋಗಿಲೆಗಳು
ಗರಿಬಿಚ್ಚಿ ನರ್ತನಗೈಯುವ ನವಿಲುಗಳು
ಒಂದನೊಂದನು ಮುದ್ದಿಸುವ ಪಾರಿವಾಳಗಳು
ಇಂದು ಗಿರಿ-ಗವ್ಹರ-ಸೇರಿವೆ;
ವಾರ್ತೆ ಓದುವ ಟಿ. ವ್ಹಿ. ವನಿತೆಯರು ಮಾತ್ರ
ಕೋಮು-ದಳ್ಳುರಿಯ ಸುದ್ದಿ
ಮುಗುಳ್ನಗೆಯ ಹೊರಸೂಸುತ್ತಿದ್ದಾರೆ,

ನಿತ್ಯ 'ವಂದೇ ಮಾತರಂ'
ರಾಷ್ಟ್ರಗೀತೆ ಹೇಳುವ ಕಂದಮ್ಮಗಳು
ಇಂದು ಮನೆ ಮಾಳಿಗೆಯ ಮೇಲೆ
'ಕುಂಟಾಟ' ಆಡಲು ಹತ್ತಿದ್ದಾರೆ.
ಮನೆಯ ಒಳಗಿನ
ಲಾವಂಡಿಗೆ ಜಡಿದುಕೊಂಡು.

ಆದರೆ-
ಮುಸುರಿ ಕೆಲಸ ಮಾಡುವ ಬೂಬು ಮಾತ್ರ
ಎಂದಿನಂತೆ ಬಾಗಿಲು ಬಡಿದು
ಹಿತ್ತಲದ ಕದವ ತಗೆಯಿಸುತ್ತಾಳೆ;
ಎಂಜಲು ಪಾತ್ರೆ ತಿಕ್ಕಿ
'ಮೈ ಫಿರ್ ಆತೂಂ' ಎಂದ್ಹೇಳಿ
ಸಾಗುತ್ತಾಳೆ ಮುಂದಿನ-ಮನೆಗೆ
ಮುಗುಳ್ನಗೆಯನು ಚಲ್ಲುತ್ತಾ.

## ವಾಮನ ಬೇಂದ್ರೆ

---

# ಕೋಮು ಸೌಹಾರ್ದ

ನಮ್ಮ ನಾಗತ್ತೆಗೆ ಮೀಸೆ ಬಂದಾಗ
ಅವಳನ್ನ ಚಿಕ್ಕಪ್ಪಾ ಅಂತ ಕೂಗಿದಾಗ
ಆಗೋ ವಿಚಿತ್ರ ವಿಪರ್ಯಾಸ—
ಕೋಮು ಸೌಹಾರ್ದ ಎಂಬ
ಈ ಜೋಡು ಶಬ್ದದ ಬಳಕೆ.

ಬಿಸಿನೀರನ್ನೇ ಕಾಸುವವರು
ಗೇಟುಬಾಗಿಲು ಹಾಕುವವರು
ಕೋಮು ಸೌಹಾರ್ದದ ಅಪೇಕ್ಷೆ ಮಾಡಬಹುದು
ಇದು ಮಾತಿನ ಮಹತಿ ಮಾತ್ರ.

'ಮಾನವಜಾತಿ ತಾನೊಂದೆ ವಲಂ'
ಅಂದ ಪಂಪ !
'ಎಲೆ ಜಾತಿ ! ಸಕಲ ಪುಷ್ಪ ಜಾತಿಗೆ ಜಾತಿ!
ಅಂದಾ ಹರಿಹರ !
'ಜಾತಿ ಹೀನನ ಮನೆಯ ಜ್ಯೋತಿ ತಾ ಹೀನವೆ ?'
ಅಂತ ಕೇಳಿದಾ ಸರ್ವಜ್ಞ !

ನಾವು
ಜಾತಿ, ಮತ, ಪಂಥ, ಪಂಗಡ
ಬುಡಕಟ್ಟು, ಕುಲಾ-ಅಂತ, ಅಳೋ ಕೂಸುಗಳಿಗೆ
ಕೋಮು ಅಂಬೋ ಒಂದs ಕುಲಾವಿ ಕಟ್ಟಿ
ಸೌಹಾರ್ದದ ಜೋಗಳಾ ಹಾಡಿ
ತಟ್ಟಿ ಮಲಗಿಸಬೇಕು ಅಂತೇವಿ.
ಇದು ನಮ್ಮ ಇಚ್ಛೆ.
ಕೂಸಿನ ಇಚ್ಛೆ ಕೂಸಿಗೇ ಗೊತ್ತು.

ಕೋಮು-ಸಿಡಿಲಿನ ಮರಿ !
ಸೌಹಾರ್ದ-ಬೆಳಕಿನ ಕಿರಣ !
ಸಿಡಿಲು ಬೆಳಕಿನ ವಿಕೃತಿ
ಪ್ರಾಣ ಸಂಹಾರಕ;
ಬೆಳಕು ಪ್ರೇಮ ಪ್ರಕೃತಿ
ಪ್ರಾಣ ಪೋಷಕ.

ಸೌಹಾರ್ದ : ಭಾವದ ವಿಷಯ
ಕೋಮು : ಬುದ್ಧಿಯ ಕಸರತ್ತು
ಬುದ್ಧಿ ಭಾವಗಳ ತಾಕಲಾಟ
ಆಧುನಿಕ ರಾಜಕಾರಣ.

ಕೋಮು :
ಅಧಿಕಾರ, ಅಹಂಕಾರ, ವೈಶಿಷ್ಟ್ಯ, ಹಿರಿಮೆಯ ಪ್ರತೀಕ
ಅಸಮಾನತೆ ಎಂಬ ಈ ಹೆಗ್ಗಣ
ಸೌಹಾರ್ದದ ಮನೆಯ ಬೀಳಿಸದೇ ಬಿಟ್ಟೀತೆ ?

ಕೋಮು, ಸೌಹಾರ್ದ
ಒಂದಕ್ಕೊಂದು ಜೊತೆ ಆಗಬಲ್ಲವೆ ?
ಒಂದು ಸೀಗೆ; ಇನ್ನೊಂದು ಎಣ್ಣೆ !

ಕೋಮು ಸೌಹಾರ್ದದ ಸಮಸ್ಯೆ
ಬಿಚ್ಚಿ ಹೇಳಿದರ-
ತಡಕೊಳ್ಳಲಿಕ್ಕೆ ಆಗದವರೂ ಇದ್ದಾರ;
ಮುಚ್ಚಿ ಹೇಳಿದರ-
ತಿಳಿದೇ ಇಲ್ಲಾ ಅಂತ ಸಾಧಿಸುವವರೂ ಇದ್ದಾರ.

ಅದಕ್ಕಂತಽ
ಅಡ್ಡಗ್ವಾಡಿ ಮ್ಯಾಲೆ ದೀಪಾ ಇಟ್ಟದ.
ಪ್ರಕಾಶ ಬೇಕಾದವರು
ಅದನ್ನ ಪಡೆಯಬಹುದು.

ಅಥವಾ ಉಫ್ ಅಂತ ಊದಿ
ಮಲಗಬಹುದು.

ರಾಜು ಹೆಗಡೆ

## ಇಂಡಿಯಾ ಮತ್ತು ಈರುಳ್ಳಿ

ನಾ ಈರುಳ್ಳಿ ಸುಲಿಯುತಿದ್ದೆ:
ಗೆಳೆಯ ಹೇಳತ್ತಿದ್ದ;
ಸಾಬರನ್ನು ಓಡಿಸಬೇಕು
ಒಂದು ಸಿಪ್ಪೆಯ ಸುಲಿದೆ
ಕ್ರೈಸ್ತರನ್ನು ಕಳಿಸಬೇಕು
ಇನ್ನೊಂದು ಕಳೆದೆ
ಹಿಂದುಳಿದವರನ್ನು ಹಿಮ್ಮೆಟ್ಟಿಸಬೇಕು
ಮತ್ತೊಂದು ತೆಗೆದೆ
ಹೀಗೆ ನಾ ತೆರೆಯುತ್ತ ಹೋದೆ
ಗೆಳೆಯ ಸುಲಿಯುತ್ತ ಹೋದ
ಕೊನೆಗೆ ಉಳಿದದ್ದು
ನನ್ನ ಅವನ ಕಣ್ಣುಗಳಲ್ಲಿ ನೀರು ಮಾತ್ರ.

# ಹಿಂದೂ-ಮುಸ್ಲಿಂ : ಕೆಲವು ಗ್ರಹಿಕೆಗಳು

ಸಂಜೀವ ಕುಲಕರ್ಣಿ

ಡಿಸೆಂಬರ್ ಆರರ ಅಯೋಧ್ಯಾ ಕಾಂಡದ ನಂತರ ಈಗ ಎಲ್ಲಿ ನೋಡಿದಲ್ಲಿ ಹಿಂದೂ-ಮುಸ್ಲಿಮ್ ಸಂಬಂಧಗಳ ಕುರಿತಾಗಿಯೇ ಚರ್ಚೆ. ಮತ್ತು ಈಗ ಸ್ವಾಭಾವಿಕವಾಗಿಯೇ ಈ ಚರ್ಚೆಗಳಿಗೆ ಹೆಚ್ಚಿನ ಆಳ ಮತ್ತು ವಿಸ್ತಾರ ಪ್ರಾಪ್ತವಾಗಿದೆ. ಇಂತಹ ಸಂದರ್ಭದಲ್ಲಿ ಕೆಲವು ಸಾಮಾನ್ಯ ಗ್ರಹಿಕೆಗಳನ್ನು ಒರೆಗಲ್ಲಿಗೆ ಹಚ್ಚಿ ನೋಡುವದು ಅವಶ್ಯವೆನಿಸಿದ್ದರಿಂದ ಈ ಒಂದು ಚಿಕ್ಕ ಪ್ರಯತ್ನ.

ಇಂತಹ ಚರ್ಚೆಗಳಲ್ಲಿ ಆರ್ ಎಸ್ ಎಸ್ ವಿಚಾರಧಾರೆಯನ್ನು ಒಪ್ಪುವ ಜನರಿಂದ ಕೆಲವು ವಿಶಿಷ್ಟವಾದ ಗ್ರಹಿಕೆಗಳು ಅಥವಾ ಅಭಿಪ್ರಾಯಗಳು ಪದೇ ಪದೇ ವ್ಯಕ್ತವಾಗುತ್ತವೆ. ಈ ಗ್ರಹಿಕೆಗಳು ಯಾವತ್ತೂ ಒಂದೊಂದಾಗಿ ಅಥವಾ ಪ್ರತ್ಯೇಕವಾಗಿ ಬರುವದಿಲ್ಲ. ಅವು ಯಾವಾಗಲೂ ಒಟ್ಟಾಗಿಯೇ ಬರುತ್ತವೆ ಅಲ್ಲದೆ ಅವು ಒಂದರೊಳಗೊಂದು ಚೆನ್ನಾಗಿ ಹೊಸೆದುಕೊಂಡು ದಪ್ಪ ಹಗ್ಗವಾಗಿಬಿಡುತ್ತವೆ. ಹಾಗೂ ಈ ಗ್ರಹಿಕೆ ಅಥವಾ ಅಭಿಪ್ರಾಯಗಳ ಹಗ್ಗ - ನಾವು ಜಾಗರೂಕರಾಗಿ ಇರದಿದ್ದರೆ – ನಮ್ಮನ್ನು ದರದರನೇ ಎಳೆದೊಯ್ದು ಒಂದು ವಿಶಿಷ್ಟವಾದ ನಿರ್ಧಾರಕ್ಕೆ ತಂದು ನಿಲ್ಲಿಸಿ ಬಿಡುತ್ತವೆ.

ಈ ಗ್ರಹಿಕೆಗಳನ್ನು ಸ್ಥೂಲವಾಗಿ ಹೀಗೆ ಮಂಡಿಸಬಹುದು:

೧) ಮುಸ್ಲಿಮರು ನಾಲ್ಕು ನಾಲ್ಕು ಹೆಂಡಂದಿರನ್ನು ಮದುವೆಯಾಗುತ್ತಾರೆ.

೨) ಮುಸ್ಲಿಮರು ಹೆಚ್ಚು ಮಕ್ಕಳನ್ನು ಹಡೆಯುತ್ತಾರೆ.

೩) ಮುಸ್ಲಿಮರಲ್ಲಿ ಕುಟುಂಬ ಯೋಜನೆ ಇಲ್ಲ.

೪) ಏಕರೂಪ ನಾಗರಿಕ ಸಂಹಿತೆ (ಕಾಮನ್ ಸಿವಿಲ್ ಕೋಡ್) ಮುಸ್ಲಿಮರಿಗೂ ಲಾಗೂ ಆಗಬೇಕು.

ಈ ಗ್ರಹಿಕೆಗಳ ಹಗ್ಗವನ್ನು ಎಳೆದೆಳೆದು ನಿರ್ಮಿಸುವ ಅಂತಿಮ ನಿಲುವಿನ ಸ್ವರ "ನಾಳೆ ಭಾರತ ದೇಶದಲ್ಲಿ ಮುಸ್ಲಿಮರೇ ಬಹುಸಂಖ್ಯಾತರಾಗಿ ಹಿಂದೂಗಳ ಅಸ್ತಿತ್ವಕ್ಕೇ ಸಂಚಕಾರ ಬರುತ್ತದೆ".

ಹಗ್ಗವನ್ನು ಬಿಡಿಸಿ ಗ್ರಹಿಕೆಗಳ ಎಳೆಗಳನ್ನು ಒಂದೊಂದಾಗಿ ಪರೀಕ್ಷಿಸೋಣ.
ಮುಸ್ಲಿಮ್ ಗಂಡಸರು ನಾಲ್ಕು ನಾಲ್ಕು ಹೆಂಗಸರನ್ನ ಮದುವೆಯಾಗುತ್ತಾರೆ : ಇದು ಎಂತಹ ಹುಸಿಸುಳ್ಳು ಎಂಬುದನ್ನು ತಿಳಿದುಕೊಳ್ಳಲು ಕೇವಲ ಒಂದೇ ಒಂದು ಕ್ಷಣ ಸಾಕು. ನಿಸರ್ಗವು ಧರ್ಮಾತೀತವಾದುದರಿಂದ ಯಾವ ಧರ್ಮದಲ್ಲಿಯೇ ಆಗಲಿ ಜಾತಿಯಲ್ಲಿಯೇ ಆಗಲಿ ಹುಟ್ಟುವ ಪ್ರತಿ ನೂರು ಮಕ್ಕಳಲ್ಲಿ ಐವತ್ತು ಹೆಣ್ಣು ಹಾಗೂ ಐವತ್ತು ಗಂಡು ಇರುತ್ತವೆ. ಮುಸ್ಲಿಮ ಧರ್ಮದಲ್ಲಿಯೂ ನಿಸರ್ಗ ಈ ಪ್ರಮಾಣವನ್ನು ಕಾಯ್ದುಕೊಳ್ಳುತ್ತದೆ ಎಂಬುದನ್ನು ಪ್ರತ್ಯೇಕವಾಗಿ ಹೇಳಬೇಕಾಗಿಲ್ಲ. ಜನನದ ವೇಳೆಯಲ್ಲಿ ಈ ಪ್ರಮಾಣವಾದರೆ ಮದುವೆಯ ವಯಸ್ಸಿಗೆ ಬಂದಾಗ ? ಆಗಲೂ ಸಹಿತ ಇತರ ಧರ್ಮ ಜಾತಿಗಳಲ್ಲಿ ಹೇಗೊ ಹಾಗೆಯೇ ಮುಸ್ಲಿಮರಲ್ಲಿಯೂ ಗಂಡಸರಿಗಿಂತ ಹೆಂಗಸರ ಸಂಖ್ಯೆ ಕಡಿಮೆ. ೧೯೮೧ ರ ಜನಗಣತಿಯ ಪ್ರಕಾರ ನಮ್ಮ ದೇಶದಲ್ಲಿ ಪ್ರತಿ ಸಾವಿರ ಗಂಡಸರಿಗೆ ಹೋಲಿಸಲಾಗಿ ಕೇವಲ ೯೩೧ ಹೆಂಗಸರಿದ್ದಾರೆ. ಇದು ನಮ್ಮ ಪುರುಷ ಶ್ರೇಷ್ಠ ಸಮಾಜ ರೂಢಿಸಿಕೊಂಡಿರುವ ಅನೇಕ ಸ್ತ್ರೀ ವಿರೋಧಿ ಮೌಲ್ಯಗಳ ಪರಿಣಾಮ. ಗಂಡಸರಿಗಿಂತ ಹೆಂಗಸರ ಸಂಖ್ಯೆ ಕಡಿಮೆ ಎಂಬುದು ಮುಸ್ಲಿಮರಿಗೂ ಅನ್ವಯಿಸುವ ಮಾತು. ಈ ಸತ್ಯವನ್ನು ಮನಗಂಡ ಬಳಿಕ ಈ ಕೆಳಗಿನವುಗಳಲ್ಲಿ ಯಾವುದು ಸರಿ ಎಂಬುದನ್ನು ನೀವೇ ಹೇಳಿರಿ.

೧) ಮುಸ್ಲಿಮ್ ಗಂಡಸರು ನಾಲ್ಕು ನಾಲ್ಕು ಹೆಂಗಸರನ್ನು ಮದುವೆಯಾಗುತ್ತಾರೆ ಎಂಥಾದರೆ ಒಂದು ನೂರು ಜನ ಮುಸ್ಲಿಂ ಗಂಡಸರಿಗೆ ನಾಲ್ಕು ನೂರು ಜನ ಮುಸ್ಲಿಮ್ ಹೆಂಗಸರಿರುತ್ತಾರೆ.

೨) ಒಬ್ಬ ಮುಸ್ಲಿಂ ಗಂಡಸು ನಾಲ್ವರನ್ನು ಮದುವೆಯಾಗುವುದಾದರೆ ಮದುವೆ ಆಗುವ ಪ್ರತಿ ಗಂಡಸಿಗೆ ಮೂವರು ಗಂಡಸರು ಮದುವೆಯಿಲ್ಲದೆ ಉಳಿಯುತ್ತಾರೆ.

೩) ನೂರು ಜನ ಮುಸ್ಲಿಂ ಗಂಡಸರು ನೂರು ಜನ ಮುಸ್ಲಿಂ ಹೆಂಗಸರನ್ನೂ ಮುನ್ನೂರು ಜನ ಮುಸ್ಲಿಮೇತರ ಹೆಂಗಸರನ್ನೂ ಮದುವೆಯಾಗುತ್ತಾರೆ.

ನಿಸರ್ಗವು ಮನುಷ್ಯರಲ್ಲಿ ಏಕಪತಿ ಹಾಗೂ ಏಕಪತ್ನಿ ಸಂಬಂಧಗಳನ್ನೇ ರೂಪಗೊಳಿಸಿದೆ. ಅಂದರೆ ಬಹುಸಂಖ್ಯಾತ ಮನುಷ್ಯರು ಸ್ವಾಭಾವಿಕವಾಗಿಯೇ ಏಕಪತಿ ಮತ್ತು ಏಕಪತ್ನಿ ಸಂಬಂಧಗಳನ್ನು ನೆಚ್ಚಿಕೊಂಡಿರುತ್ತಾರೆ. ನಿಸರ್ಗವೇ ಹೀಗಿರುವದರಿಂದ ಮುಸ್ಲಿಂ ಸಮುದಾಯದಲ್ಲಿ ಕೂಡ ಒಬ್ಬ ಗಂಡಸು ಒಬ್ಬರಿಗಿಂತ ಹೆಚ್ಚು ಹೆಂಡಿರನ್ನು

ಪಡೆದಿರುವದು ಒಂದು ಅಪವಾದವಾಗಿರುತ್ತದೆಯೇ ಹೊರತು ಸರ್ವೇಸಾಮಾನ್ಯ ಸಂಗತಿಯಲ್ಲ. ಮುಸ್ಲಿಮರಲ್ಲಿ ಇರುವ ಬಹುಪತ್ನಿತ್ವದ ಪ್ರಮಾಣ ನಿಜವಾಗಿಯೂ ಎಷ್ಟು ? ೧೯೭೧ ರಲ್ಲಿ ಕೇಂದ್ರ ಸರಕಾರವೇ ನಡೆಸಿದ ಒಂದು ಸಂಶೋಧನೆಯ ಪ್ರಕಾರ ಮುಸ್ಲಿಮರಲ್ಲಿ ಬಹುಪತ್ನಿತ್ವದ ಪ್ರಮಾಣ ಶೇ. ೫.೭ ರಷ್ಟು. ಮತ್ತೆ ಹಿಂದೂಗಳಲ್ಲಿ ? ಹಿಂದೂಗಳಲ್ಲಿ ಶೇ. ೫.೮ ! ಈ ಸಂಶೋಧನೆಯ ಇನ್ನೊಂದು ಅಂಶವೆಂದರೆ ಎಲ್ಲ ಸಮುದಾಯಗಳಲ್ಲಿಯೂ ಬಹುಪತ್ನಿತ್ವದ ಪ್ರಮಾಣ ಕ್ರಮೇಣ ಕಡಿಮೆಯಾಗುತ್ತಿದೆ. ನಗರ ಪ್ರದೇಶಗಳ ಉಚ್ಚ ಜಾತಿಯ ಹಿಂದೂಗಳಿಗೆ ಈ ಅಂಕಿ ಅಂಶ ಸ್ವಲ್ಪ ಆಘಾತಕರವಾಗಿಯೇ ತೋರಬಹುದು. ಆದರೂ ಇದು ವಸ್ತುಸ್ಥಿತಿ.

ಎರಡನೆಯದಾಗಿ ಇಸ್ಲಾಮ್ ಧರ್ಮದಲ್ಲಿ ಕುಟುಂಬ ಯೋಜನೆ ನಿಷಿದ್ಧವಾಗಿದೆ; ಆದುದರಿಂದ ಮುಸ್ಲಿಮರು ಬಹಳಷ್ಟು ಮಕ್ಕಳನ್ನು ಹಡೆಯುತ್ತಾರೆ ಎಂಬ ವಾದ. ನಮ್ಮ ದೇಶದಲ್ಲಿ ಹಾಗೂ ಜಗತ್ತಿನ ಇತರೆಡೆಗಳಲ್ಲಿ ಈ ವರೆಗೂ ಕುಟುಂಬ ಯೋಜನೆಯ ಬಗ್ಗೆ ಅನೇಕ ಅಧ್ಯಯನಗಳು ನಡೆದಿವೆ. ಈ ಅಧ್ಯಯನಗಳಿಂದ ಹೊರಡುವ ನಿಷ್ಕರ್ಷ:

೧) ಒಂದು ಜನಸಮುದಾಯದಲ್ಲಿಯ ಆದಾಯ ಹೆಚ್ಚುತ್ತ ಹೋದಂತೆ ಪ್ರತಿ ಕುಟುಂಬದಲ್ಲಿಯ ಸರಾಸರಿ ಮಕ್ಕಳ ಸಂಖ್ಯೆ ಕಡಿಮೆಯಾಗುತ್ತದೆ. ಅಂದರೆ ಆರ್ಥಿಕ ಪರಿಸ್ಥಿತಿ ಸುಧಾರಿಸಿದಂತೆ ಜನಸಂಖ್ಯಾ ಹೆಚ್ಚಳದ ಪ್ರಮಾಣ ಕುಂಠಿತವಾಗುತ್ತದೆ.

ಈ ಸತ್ಯದ ಆಧಾರದ ಮೇಲೆಯೇ ಇಂದಿರಾಗಾಂಧಿ ಹಿಂದೊಮ್ಮೆ ಮೆಕ್ಸಿಕೊದಲ್ಲಿ ಜರುಗಿದ ಜಾಗತಿಕ ಜನಸಂಖ್ಯಾ ಸಮ್ಮೇಳನದಲ್ಲಿ 'ಪ್ರಗತಿಯೇ ಅತ್ಯುತ್ತಮ ಗರ್ಭ ನಿರೋಧಕ '(Developmant is the Best Contraceptive) ಎಂದು ಘೋಷಿಸಿದ್ದರು.

೨) ಒಂದು ಸಮಾಜದಲ್ಲಿ ಕುಟುಂಬ ಯೋಜನೆ ಕಾರ್ಯಕ್ರಮದ ಯಶಸ್ಸು ಈ ಕೆಳಗಿನ ಸಾಮಾಜಿಕ ಆರ್ಥಿಕ ಸಂಗತಿಗಳನ್ನು ಅವಲಂಬಿಸಿರುತ್ತದೆ– ಉದ್ಯೋಗ, ಆದಾಯ, ತಂತ್ರಜ್ಞಾನದ ಲಭ್ಯತೆ, ಮಕ್ಕಳ ಉಳಿಯುವಿಕೆ, ಆರೋಗ್ಯ ಮತ್ತು ಶಿಕ್ಷಣದ ಸೌಲಭ್ಯಗಳು, ಮಕ್ಕಳ ಆರ್ಥಿಕ ಬೆಲೆ, ಮತ್ತು ಮುಪ್ಪಿನಲ್ಲಿಯ ಜೀವನ ಭದ್ರತೆ.

೩) ಕುಟುಂಬ ಯೋಜನೆಯ ಕಾರ್ಯಕ್ರಮದ ಮೇಲೆ ಧರ್ಮ ಅಥವಾ ಜಾತಿ ಇವು ಬೀರುವ ಪ್ರಭಾವ ಬಹಳ ಕಡಿಮೆ.

'ಇಸ್ಲಾಂ ಧರ್ಮವು ಕುಟುಂಬ ಯೋಜನೆಯ ವಿರುದ್ಧವಾಗಿದೆಯೇ ?' ಎಂಬ ಶೀರ್ಷಿಕೆಯ ತಮ್ಮ ಅಧ್ಯಯನವೊಂದರಲ್ಲಿ ಎಂ. ಈ ಖಾನ್ ಅವರು ಕುರಾನ್ ಗ್ರಂಥವು ಕುಟುಂಬ ಯೋಜನೆಯನ್ನು ಪ್ರತಿಬಂಧಿಸುವದಿಲ್ಲ ಎಂಬುದನ್ನು ಸ್ಪಷ್ಟಪಡಿಸುತ್ತಾರೆ. (ಭಾರತದ ಮುಸ್ಲಿಮರಲ್ಲಿ ಜನನ ನಿಯಂತ್ರಣ-ಎಂ. ಈ. ಖಾನ್ (ಸಂಪಾದಕರು) - ಮನೋಹರ ಪ್ರಕಾಶಕರು ಹೊಸದಿಲ್ಲಿ; ೧೯೭೮).

ಟರ್ಕಿ, ಇಂಡೋನೇಶಿಯಾ ಹಾಗೂ ಇಜಿಪ್ತ ಮುಂತಾದ ಮುಸ್ಲಿಂ ಬಹುಸಂಖ್ಯಾತ ದೇಶಗಳಲ್ಲಿ ಕುಟುಂಬ ಯೋಜನೆ ಕಾರ್ಯಕ್ರಮವು ಸಾಕಷ್ಟು ದೊಡ್ಡ ಪ್ರಮಾಣದಲ್ಲಿ ಜಾರಿಯಲ್ಲಿದೆ. ಭಾರತದಲ್ಲಿ ಕೂಡ ಮುಸ್ಲಿಂ ಸಮುದಾಯದಲ್ಲಿ ಕುಟುಂಬ ಯೋಜನೆ ಕಾರ್ಯಕ್ರಮವು ಗಣನೀಯ ಪ್ರಮಾಣದಲ್ಲಿ ಸ್ವೀಕೃತವಾಗಿದೆ. (ಆಪರೇಶನ್ಸ್ ರಿಸರ್ಚ್ ಗ್ರುಪ್; ಭಾರತದಲ್ಲಿ ಕುಟುಂಬ ಯೋಜನೆ ವಿಧಾನಗಳು: ದ್ವಿತೀಯ ಅಖಿಲ ಭಾರತ ಸರ್ವೇಕ್ಷಣ; ಬರೋಡಾ ೧೯೮೧)

೧೯೬೧, ೧೯೭೧ ಹಾಗೂ ೧೯೮೧ ರ ಜನಗಣತಿಗಳ ಅಂಕಿ-ಅಂಶಗಳನ್ನು ವಿಶ್ಲೇಷಿಸಿದಾಗ ಮುಸ್ಲಿಮರ ಜನಸಂಖ್ಯೆ ಅಡ್ಡಾದಿಡ್ಡಿ ಹೆಚ್ಚುತ್ತಿದೆ, ನಾಳೆ ಅವರೇ ಬಹುಸಂಖ್ಯಾತರಾಗಿ ಹಿಂದೂಗಳು ಅಲ್ಪಸಂಖ್ಯಾತರಾಗಿಬಿಡುತ್ತಾರೆ ಎಂಬುದು ಎಂಥ ದೊಡ್ಡ ಬಾಯಿಯ ಸುಳ್ಳು ಮತ್ತು ಕಪಟ ಮೆದುಳಿನ ಬೆದರಿಕೆ ಎಂಬುದು ನಿಚ್ಚಳವಾಗುತ್ತದೆ.

ಮುಸ್ಲಿಂ ಜನಸಂಖ್ಯಾ ಹೆಚ್ಚಳದ ಈ ಕೆಲವು ಮಿಥ್ಯಗಳನ್ನು ತಿಳಿದುಕೊಂಡ ಬಳಿಕ ಏಕರೂಪ ನಾಗರಿಕ ಸಂಹಿತೆಯನ್ನು ಚರ್ಚಿಸುವದು ಹೆಚ್ಚು ಸುಲಭವಾಗುತ್ತದೆ. ಏಕರೂಪ ನಾಗರಿಕ ಸಂಹಿತೆಯು ಇತರ ವಿವರಗಳೇನೇ ಇದ್ದರೂ ಜನಸಾಮಾನ್ಯರ ಮಟ್ಟಿಗಂತೂ ಅದು, ಒಬ್ಬ ಗಂಡಸಿಗೆ ಒಬ್ಬಳೇ ಹೆಂಡತಿಯಿರಬೇಕು ಎಂಬುದನ್ನು ಕಡ್ಡಾಯವಾಗಿಸುವ ಕಾಯದೆ ಈ ಮೊದಲೇ ಹೇಳಿದಂತೆ ಇದು ಮುಸ್ಲಿಮರಿಗೆ ಲಾಗೂ ಆಗುತ್ತಿಲ್ಲ ಎಂಬುದೇ ಅನೇಕ ಹಿಂದೂಗಳ ತಕರಾರು. ಏಕರೂಪ ನಾಗರಿಕ ಸಂಹಿತೆಯನ್ನು ಎರಡು ಕೋನಗಳಿಂದ ನೋಡಬಹುದು. ಮೊದಲು ಹಿಂದೂಗಳ ತಕರಾರಿನ ಕೋನದಿಂದ ನೋಡೋಣ.

ಮುಸ್ಲಿಮ್ ಗಂಡಸರು ಒಬ್ಬರಿಗಿಂತ ಹೆಚ್ಚು ಹೆಂಡಂದಿರನ್ನು ಹೊಂದಿರುತ್ತಾರೆ ಹಾಗೂ ಅದರಿಂದಾಗಿ ಹೆಚ್ಚು ಮಕ್ಕಳನ್ನು ಹಡೆಯುತ್ತಾರೆ ಎಂಬ ಅಂಜಿಕೆಯೇ ಹಿಂದೂಗಳಿಗೆ ಏಕರೂಪ ನಾಗರಿಕ ಸಂಹಿತೆ ಒಂದು ದೊಡ್ಡ ಸಮಸ್ಯೆಯಾಗಿ ಕಾಣಲು ಕಾರಣವಾಗುತ್ತದೆ. ಆದರೆ ಆ ಅಂಜಿಕೆಯೇ ಹೇಗೆ ತಳಬುಡವಿಲ್ಲದ್ದಾಗಿದೆ ಎಂಬುದನ್ನು ನಾವು ಈಗಾಗಲೇ ನೋಡಿಯಾಗಿದೆ.

ನಾಳೆ ಕ್ರಿಶ್ಚಿಯನ್ ಸಂಘಟನೆಯೊಂದು ಹುಟ್ಟಿಕೊಂಡು ಕ್ರಿಶ್ಚಿಯನ್ ಹೆಂಗಸರು ಮದುವೆಯಾದ ಬಳಿಕ ಮಂಗಳಸೂತ್ರ ಧರಿಸುವದಿಲ್ಲ; ಆದ್ದರಿಂದ ಹಿಂದೂ ಹೆಂಗಸರು ಮಂಗಳಸೂತ್ರ ಧರಿಸಬಾರದು ಎಂಬ ಬೇಡಿಕೆಯೊಂದನ್ನು ಮಂಡಿಸುತ್ತಾರೆ ಅಂತಿಟ್ಟು ಕೊಳ್ಳಿರಿ. ಇದಕ್ಕೆ ಹಿಂದೂಗಳಿಂದ ಬರುವ ಪ್ರತಿಕ್ರಿಯೆ ಯೇನು ? "ಮಂಗಳ ಸೂತ್ರವು ಹಿಂದೂಗಳಲ್ಲಿ ಪ್ರಚಲಿತ ಇರುವ ಒಂದು ಪದ್ಧತಿಯು. ಇದರಿಂದ ಹಿಂದೂ ಗಳಿಗೆ ಆಗಲಿ ಇತರ ಧರ್ಮೀಯರಿಗಾಗಲೀ ಅಥವಾ ಒಟ್ಟಾರೆ ದೇಶಕ್ಕಾಗಲಿ ಏನೂ ಹಾನಿಯಿಲ್ಲ. ಆದುದರಿಂದ ಕ್ರಿಶ್ಚಿಯನ್ನರ ಪದ್ಧತಿ ಅವರಿಗಿರಲಿ, ನಮ್ಮ ಪದ್ಧತಿ ನಮಗಿರಲಿ" ಎಂದು ಹಿಂದೂಗಳು ಉತ್ತರಿಸುತ್ತಾರೆ ಅಲ್ಲವೇ ?

ಏಕರೂಪ ನಾಗರಿಕ ಸಂಹಿತೆಯ ವಿಷಯದಲ್ಲಿ ಮುಸ್ಲಿಮರೂ ಇದೇ ರೀತಿ ಉತ್ತರಿಸ ಬಹುದಲ್ಲವೇ ?

ಯಾಕೆಂದರೆ ಬಹುಪತ್ನಿತ್ವವು ಮುಸ್ಲಿಮ್ ಧರ್ಮದೊಳಗಿನ ಒಂದು ಪದ್ಧತಿ. ಅದರಿಂದ ಮುಸ್ಲಿಮ್ ಸಮುದಾಯಕ್ಕಾಗಲೀ ಇತರ ಮತಗಳ ಜನರಿಗಾಗಲೀ ಅಥವಾ ಒಟ್ಟಾರೆ ದೇಶಕ್ಕಾಗಲೀ ಏನಾದರೂ ಹಾನಿಯಾಗಿದೆಯೇ ? ಇಲ್ಲ. ಮತ್ತೆ ಮುಸ್ಲಿಮರಿಗೂ ಈ ಸಂಹಿತೆ ಅನ್ವಯವಾಗಬೇಕು ಎಂಬ ವಾದವೇಕೆ ?

ಸಮಾಜದಲ್ಲಿ ರೂಢವಾಗಿರುವ ಸಂಪ್ರದಾಯಗಳ ವಿರುದ್ಧ ಕಾಯದೆ ಮಾಡುವದೇನೊ ಸುಲಭದ ವಿಷಯ. ಆದರೆ ಅದನ್ನು ಸರಿಯಾಗಿ ಜಾರಿಯಲ್ಲಿ ತಂದು ಸಫಲಗೊಳಿ ಸುವದು ಬಹಳ ಕಷ್ಟದ ಕೆಲಸ. ವರದಕ್ಷಿಣೆ ನಿಷೇಧದ ಕಾಯದೆ ಜಾರಿಯಾಗಿ ಎಷ್ಟೋ ವರ್ಷಗಳೇ ಕಳೆದಿವೆ, ಆದರೆ ವರದಕ್ಷಿಣೆ ಕಡಿಮೆಯಾಗಿದೆಯೇ ? ಮೊದಲಿ ಗಿಂತ ಹೆಚ್ಚು ಬೆಳೆದಿದೆ. ನಗರ ಪ್ರದೇಶಗಳ ಸುಶಿಕ್ಷಿತ, ಜಾಗ್ರತ ಜನರಲ್ಲಿಯೇ ಹೆಚ್ಚು ಭೂತಾಕಾರವಾಗಿ ಬೆಳೆದಿದೆ. ಅಥವಾ ಬಾಲ್ಯ ವಿವಾಹ ಪದ್ಧತಿಯನ್ನೇ ನೋಡಿರಿ. ಅದನ್ನು ನಿಷೇಧಿಸುವ ಕಾಯದೆ ಅನೇಕ ದಶಕಗಳ ಹಿಂದೆಯೇ ಆಗಿದೆ. ಆದರೆ ಬಾಲ್ಯ ವಿವಾಹಗಳು ನಿಂತಿವೆಯೇ ? ರಾಜಸ್ಥಾನದಲ್ಲಿ ಈಗಲೂ ಪ್ರತಿ ವರ್ಷ ಅಕ್ಷಯ ತೃತಿಯಾ ತಿಥಿಯಂದು ದನಗಳ ಜಾತ್ರೆಗಳಂತೆ ಜಾತ್ರೆಗಳನ್ನು ಹೂಡಿ ಒಂದೇ ದಿನ ಸಾವಿರಾರು ಮಕ್ಕಳಿಗೆ - ತೊಟ್ಟಿಲಲ್ಲಿರುವ ಮೊಲೆ ಕುಡಿಯುವ ಕಂದ ಮ್ಮಗಳನ್ನೂ ಹಿಡಿದು-ಬಾಸಿಂಗ ಕಟ್ಟಲಾಗುತ್ತದೆ !

ಇವೆರಡೂ ಸಂಬಂಧವಿಲ್ಲದ ಉದಾಹರಣೆಗಳು ಎನ್ನುವದಾದರೆ ಏಕರೂಪ ನಾಗರಿಕ ಸಂಹಿತೆಯ ಉದಾಹರಣೆಯನ್ನೇ ತೆಗೆದುಕೊಳ್ಳಿರಿ. ಹಿಂದೂಗಳಿಗೆ ಈ ಕಾಯದೆ ಅನ್ವಯವಾದ ನಂತರ ಅವರಲ್ಲಿರುವ ಬಹುಪತ್ನಿತ್ವದ ಪ್ರಮಾಣ ಶೇಕಡಾ ೬ ರಷ್ಟಾ ದರೆ ಮುಸ್ಲಿಮರಲ್ಲಿ ಈ ಕಾಯದೆ ಲಾಗೂ ಆಗದೇನೆ ಇರುವ ಬಹುಪತ್ನಿತ್ವದ

ಪ್ರಮಾಣ ಶೇಕಡಾ ೧-೨. ರಷ್ಟು ! ಹೀಗೆ ಹಿಂದೂ ಮತ್ತು ಮುಸ್ಲಿಮರಲ್ಲಿ ಬಹುಪತ್ನಿತ್ವದ ಪ್ರಮಾಣ ಹೆಚ್ಚು ಕಡಿಮೆ ಸರಿಸಮ ಆಗಿರುವಾಗ ಕಾಯದೆ ಮಾಡುವದರಿಂದ ಯಾವ ಪದ್ಧತಿ ಕಡಿಮೆಯಾಗುವದಿಲ್ಲವೋ ಅದಕ್ಕಾಗಿ ಕಾಯದೆ ಯಾಕೆ ಮಾಡಬೇಕು ಅಥವಾ ಕಾಯದೆ ಮಾಡದೆಯೇ ಯಾವ ಪದ್ಧತಿ ಕಡಿಮೆ ಯಾಗುತ್ತಿದೆಯೋ ಅದಕ್ಕಾಗಿ ಕಾಯದೆ ಯಾಕೆ ಮಾಡಬೇಕು?

ಈ ಲೇಖನದ ಪ್ರಾರಂಭದಲ್ಲಿ ಉಲ್ಲೇಖಿಸಲಾದ ಗೃಹಿಕೆಗಳ ಹಗ್ಗವನ್ನು ಅದರ ವಿವಿಧ ಎಳೆಗಳಲ್ಲಿ ಬೇರ್ಪಡಿಸಿ ಪರೀಕ್ಷಿಸಿದಾಗ ನೋಡಿರಿ ಎಲ್ಲ ಎಳೆಗಳೂ ಹೇಗೆ ಹರಿದು ಹೋಗುತ್ತವೆ ? ಹಗ್ಗವಂತೂ ಹೇಳಹೆಸರಿಲ್ಲದೆ ಮಾಯವಾಗಿಬಿಡುತ್ತದೆ ! ಆದರೆ ದುಃಖದ ಸಂಗತಿಯೆಂದರೆ ಈ ಒಳಗೆ ಯಾವ ಹುರುಳೂ ಇಲ್ಲದ ಹೊರಗೆ ಮಾತ್ರ ಗಟ್ಟಿಯಾಗಿ ಕಾಣುವ ಹಗ್ಗವೇ ಇಂದು ಅನೇಕ ಜಾಗೃತ ಹಿಂದೂಗಳ ಮೆದುಳುಗಳನ್ನು ಹೆಚ್ಚು ಪ್ರಶ್ನೆಗಳನ್ನು ಕೇಳದಂತೆ ಬಿಗಿಯಾಗಿ ಕಟ್ಟಿಟ್ಟು ಬಿಟ್ಟಿದೆ.

ಏಕರೂಪ ನಾಗರಿಕ ಸಂಹಿತೆಯನ್ನು ಎರಡು ದೃಷ್ಟಿಕೋನಗಳಿಂದ ನೋಡಬಹುದು ಎಂದು ಹೇಳಿದ್ದೆನಲ್ಲವೇ ? ಎರಡನೆಯ ದೃಷ್ಟಿಕೋನವೆಂದರೆ ಮಹಿಳಾವಾದದ ಅಂದರೆ ಸ್ತ್ರೀ ಸಮಾನತೆಯ ದೃಷ್ಟಿಕೋನ. ಸ್ವತಂತ್ರ ಪ್ರಜಾಸತ್ತಾತ್ಮಕ ಭಾರತದಲ್ಲಿ ಸಂವಿಧಾನದ ಪ್ರಕಾರ ಸ್ತ್ರೀಯರು ಮತ್ತು ಪುರುಷರು ಸರಿಸಮಾನರು. ಆಚರಣೆ ಯಲ್ಲಿರುವ ಎಲ್ಲ ಮತಗಳೂ ಪುರುಷಶ್ರೇಷ್ಠ ಮೌಲ್ಯಗಳ ಆಧಾರದ ಮೇಲೆಯೇ ರೂಪುಗೊಂಡಿರುವದರಿಂದ ಎಲ್ಲ ಮತಗಳಲ್ಲಿಯೂ ಸ್ತ್ರೀವಿರೋಧಿ ಪದ್ಧತಿಗಳು ಕಂಡುಬರುತ್ತವೆ. ಬಹುಪತ್ನಿತ್ವ ಪದ್ಧತಿ ಇವುಗಳ ಪೈಕಿ ಒಂದು.

ಸ್ತ್ರೀಪುರುಷರ ಸಮಾನತೆಯನ್ನು ಪ್ರತಿಪಾದಿಸುವ ಸಂವಿಧಾನದಲ್ಲಿ ಬಹುಪತ್ನಿತ್ವಕ್ಕೆ ಅವಕಾಶ ಇರುವದು ಸರಿಯಲ್ಲ. ಯಾವ ಸಮಾಜದಲ್ಲಿ ಬಹುಪತಿತ್ವಕ್ಕೆ ಮಾನ್ಯತೆ ಯಿಲ್ಲವೋ ಅಲ್ಲಿ ಬಹುಪತ್ನಿತ್ವಕ್ಕೂ ಮಾನ್ಯತೆ ಇರಕೂಡದು. ಆದುದರಿಂದ ಏಕರೂಪ ನಾಗರಿಕ ಸಂಹಿತೆಯು ನಮ್ಮ ದೇಶದಲ್ಲಿ ಹಿಂದೂ, ಮುಸ್ಲಿಮ್, ಕ್ರಿಶ್ಚಿಯನ್ ಎನ್ನದೆ ಎಲ್ಲ ಜನರಿಗೂ ಅನ್ವಯವಾಗಬೇಕು. ಇಲ್ಲದೆ ಹೋದಲ್ಲಿ ಅದು ಸ್ತ್ರೀ ಸಮುದಾಯಕ್ಕೆ ಆಗುವ ಅನ್ಯಾಯ. ಮುಸ್ಲಿಮರಿಗೂ ಏಕರೂಪ ನಾಗರಿಕ ಸಂಹಿತೆ ಕಡ್ಡಾಯವಾಗಬೇಕು ಎಂದು ಹಿಂದೂ ಮೂಲಭೂತವಾದಿಗಳು ಒದರಲು ಮುಖ್ಯ ಕಾರಣ—ಮುಸ್ಲಿಮರ ಜನಸಂಖ್ಯೆ ವಿಪರೀತವಾಗಿ ಹೆಚ್ಚುತ್ತಿದೆ ಎಂಬ ತಳಬುಡವಿಲ್ಲದ ಅಂಜಿಕೆ. ಸಂಹಿತೆಯನ್ನು ಮುಸ್ಲಿಮ್ ಮೂಲಭೂತವಾದಿಗಳು ಒಪ್ಪದೆ ಇರಲು ಕಾರಣ—ಸಮುದಾಯದ ಮೇಲಿನ ತಮ್ಮ ಬಿಗಿಮುಷ್ಟಿ ಸಡಿಲವಾದೀತೆಂಬ ಅಂಜಿಕೆ. ಇವರ್ಯಾರೂ ಏಕರೂಪ ನಾಗರಿಕ ಸಂಹಿತೆಯನ್ನು ಸ್ತ್ರೀ ಸಮಾನತೆಯ ದೃಷ್ಟಿಕೋನ ದಿಂದ ನೋಡುವದಿಲ್ಲ; ಸ್ವಾಗತಿಸುವದಿಲ್ಲ. ಯಾಕೆಂದರೆ ಅವರು ಹೀಗೆ ಮಾಡಿ

ದ್ದಾದರೆ ತಕ್ಷಣವೇ ವರದಕ್ಷಿಣೆ. ಬುರ್ಖಾ, ಮಂಗಳಸೂತ್ರ, ಮುಟ್ಟಿನ ಕಟ್ಟು ನಿಟ್ಟಳೆಗಳು ಮಹಿಳೆಯರ ಧಾರ್ಮಿಕ ಹಕ್ಕುಗಳು ಇವೇ ಮುಂತಾದ ಹತ್ತಾರು ಸ್ತ್ರೀ ಸಂಬಂಧಿತ ವಿಷಯಗಳು ಅವರನ್ನು ಸುತ್ತುವರಿದು ಅವರ ಬೇರುಗಳಿಗೇ ಕೈ ಹಾಕುತ್ತವೆ !

ಈ ಹಿಂದೆ ಹೇಳಿದಂತೆ ಮಾನವರಲ್ಲಿ ಏಕಪತಿತ್ವ ಹಾಗೂ ಏಕಪತ್ನಿತ್ವ ಇದೊಂದು ನೈಜ ನೈಸರ್ಗಿಕ ನಿಯಮವೆಂದಾದಲ್ಲಿ ಸ್ತ್ರೀ ಸಮಾನತೆಯ ದೃಷ್ಟಿಯಿಂದಲಾದರೂ ಏಕರೂಪ ನಾಗರಿಕ ಸಂಹಿತೆಯನ್ನು ಕಡ್ಡಾಯವಾಗಿಸುವ ಅವಶ್ಯಕತೆಯೇನಿದೆ ಎಂದು ಕೆಲವರು ಕೇಳಬಹುದು. ಅವಶ್ಯತೆ ಯಿದೆ—ಅದು ಜನಸಂಖ್ಯಾ ಹೆಚ್ಚಳದ ಕಾರಣಕ್ಕಾಗಿ ಅಲ್ಲ; ಆದರೆ ಬಡ ಅಸಹಾಯಕ ಹೆಂಗಸರ ಶೋಷಣೆ ನಿಲ್ಲಬೇಕು ಎಂಬ ಕಾರಣಕ್ಕಾಗಿ. ಇತಿಹಾಸದುದ್ದಕ್ಕೂ ನಾವು ಇದನ್ನು ನೋಡುತ್ತೇವೆ. ಸಾಮಾಜಿಕ ಮಾನ್ಯತೆ ಸಿಕ್ಕಿದ್ದಾದರೆ ದುಡ್ಡು ಮತ್ತು ಅಧಿಕಾರ ಇರುವ ಒಬ್ಬ ಗಂಡಸು ಹತ್ತೋ ನೂರೋ ಹೆಂಗಸರನ್ನು ಮದುವೆಯಾಗುತ್ತಾನೆ. ನಮ್ಮ ದೇಶದ ಚರಿತ್ರೆಯಲ್ಲಿ ನಾವು ಇದರ ಅಸಂಖ್ಯ ಉದಾಹರಣೆಗಳನ್ನು ತೋರಿಸಬಹುದು. ಹಿಂದೂ ರಾಜರೇ ಆಗಲಿ ಮುಸ್ಲಿಮ ರಾಜರೇ ಆಗಲಿ ಎಲ್ಲರಿಗೂ ಅಂತಃಪುರದ ತುಂಬ ರಾಣಿಯರು! ಮತ್ತೆ ಜಗತ್ತಿನಲ್ಲಿಯೇ ಅತ್ಯಂತ ಹೆಚ್ಚು ಹೆಂಡಂದಿರನ್ನು ಪಡೆದ ಗಂಡಸು ಯಾರು ಗೊತ್ತೇ? ನಿಸ್ಸಂಶಯವಾಗಿಯೂ ಇದು ಹಿಂದೆ, ಇಂದು ಮತ್ತು ಮುಂದೆ ಯಾವಾಗಲೂ ಅಜೇಯವಾಗಿಯೇ ಉಳಿಯುವ ದಾಖಲೆ. ಈ ದಾಖಲೆಯನ್ನು ಮಾಡಿರುವ ವ್ಯಕ್ತಿ ಮತ್ತಾರೂ ಅಲ್ಲ. ಕೇವಲ ಹದಿನಾರು ಸಾವಿರದ ಒಂದು ನೂರಾ ಎಂಟು ಮಹಿಳೆಯರನ್ನು ಮದುವೆಯಾದ ನಮ್ಮ ಆರಾಧ್ಯ ದೈವ ಶ್ರೀಕೃಷ್ಣ ಪರಮಾತ್ಮ !

ಶ್ರೀಕೃಷ್ಣಾರ್ಪಣ ಮಸ್ತು !! ●

# ಧರ್ಮ, ನಾವು ಮತ್ತು ರಾಷ್ಟ್ರ

## ವೇದರಸ

ಜ್ವಾಲಾಮುಖಿ ಸಿಡಿಯಿತು, ತಣ್ಣಗೂ ಆಯಿತು. ಲಾವಾ ಹರಿಯಿತು. ಮನೆ ಮಠ, ಜನ, ದನ, ಗಿಡ ಮರಗಳನ್ನೆಲ್ಲ ನುಂಗುತ್ತೆ. ಜ್ವಾಲಾಮುಖಿಯ ಗುಣ ಒಂದೇ–ಅದು ಜಪಾನಿರಲಿ, ಭಾರತವಿರಲಿ—ಬೆಂಕಿ ಕಾರುವದು, ಲಾವಾ ಉಗುಳುವದು.

ಕಾಲಾಂತರದಲ್ಲಿ ಲಾವಾ ತಣ್ಣಗಾಗುತ್ತದೆ. ಫಲವತ್ತಾದ ಕಪ್ಪು ನೆಲವಾಗುತ್ತದೆ. ಅಲ್ಲೆಲ್ಲ ಫಸಲು ಬೆಳೆಯಲು ಬರುತ್ತದೆ ಎನ್ನುವ ವಾದ ಅರ್ಥವಿಲ್ಲದ್ದು. ಮೂರ್ಖತನದ್ದು. ಈಗ ಗೋರಿಯಾದವರ ಲೆಕ್ಕ ಆಗಿನ ಫಸಲು ಎಂದಿಗೂ ಚುಕ್ತಾ ಮಾಡುವದಿಲ್ಲ.

ಹಣದ ಇಟ್ಟಿಗೆಗಳ ಮೇಲೆ ಕಟ್ಟಿದ ಯಾವ ದೇಗುಲದಲ್ಲೂ ದೇವರು ಜೀವಂತವಾಗಿರುವುದಿಲ್ಲ—ಆ ದೇವರ ಧರ್ಮ ಹಿಂದೂವಾಗಿದ್ದರೂ ಇಸ್ಲಾಮವಾಗಿದ್ದರೂ, ಕ್ರೈಸ್ತವಾಗಿದ್ದರೂ, ಸಿಕ್ಖ, ಜೈನ, ಬೌದ್ಧ, ಪಾರಸೀ-ಅಥವಾ ಮುಂದೆ ಉದಯಿಸಬಹುದಾದ ಯಾವ ಧರ್ಮದವನೇ ಅವನಾಗಿದ್ದರೂ ಕೂಡ.

ನಾನು ಇಲ್ಲಿ ಯಾವ ತತ್ವಗಳನ್ನೂ ಪ್ರತಿಪಾದಿಸ ಹೊರಟಿಲ್ಲ. ಬರೀ ಪ್ರತಿಪಾದಿಸುವದರಿಂದ ಮಾತ್ರವೇ ಯಾವ ತತ್ವವೂ ಜೀವಂತವಾಗಿ ಉಳಿಯುವುದಿಲ್ಲ. ಅದು ಜೀವಂತವಾಗಿರಲು ಜೀವಂತ ವ್ಯಕ್ತಿಗಳು ಅಕ್ಷರಶಃ ಪಾಲಿಸಬೇಕಾಗುತ್ತದೆ.—ತತ್ವಗಳನ್ನ. ತತ್ವಗಳಲ್ಲಿ ಸತ್ವವಿದ್ದರೆ ಅವು ತಾನೇ ಬದುಕಿ ಉಳಿಯುತ್ತವೆ. ಅವು ಬದುಕಿ ಉಳಿಯಲೇ ಬೇಕೆಂಬ ಹಠದಲ್ಲಿ ಬದುಕುವ ಜೀವಗಳನ್ನು ಬಲಿಕೊಡುವ ಅವಶ್ಯಕತೆಯಿಲ್ಲ. ಸಾಧುವೂ ಅಲ್ಲ. ಹಿಂದೂ ಧರ್ಮ—ಒಂದು ತತ್ವ, ಒಂದು ಸಂಪ್ರದಾಯ, ಒಂದು ನಂಬಿಕೆ. ಅದು – ಎಲ್ಲ ದಬ್ಬಾಳಿಕೆಗಳನ್ನು ಎದುರಿಸಿಯೂ ಕಾಲ ದೇಶಗಳನ್ನು ಮೀರಿಯೂ ಬದುಕಿ ಉಳಿದದ್ದು – ಅದರ ಆಳಕ್ಕಿಳಿದ ಸತ್ವಯುತ ಬೇರುಗಳಿಂದ. ಅದು ದಬ್ಬಾಳಿಕೆ ನಡೆಸಲಿಲ್ಲ. ದಮನ ಪ್ರವೃತ್ತಿಯನ್ನು ಅನುಸರಿಸಲಿಲ್ಲ. ಯಾರ ಮೇಲೂ ತನ್ನ ತತ್ವಗಳನ್ನು ಹೇರುವ ಪ್ರಯತ್ನ ಮಾಡಲೂ ಇಲ್ಲ. ಬದಲಿಗೆ 'ಸಹನಾವವತು ಸಹನೌಭುನಕ್ತು' ಎಂದಿತು. ನಿಮ್ಮ ದೇವರು - ನಮ್ಮ ದೇವರು ಬೇರೆಯಲ್ಲ ಎಂದಿತು. ಸುಡುವಗ್ನಿಯೊಂದೆ, ಹರಿವ ಜಲವೊಂದೆ ಇರುತಿರಲು ಎತ್ತಣದಿ ಕುಲಗೋತ್ರ ? 'ಜಾತಿ ವಿಜಾತಿಯೆನಬೇಡ ದೇವನೊಲಿದಾತನೇ ಜಾತ' ನೆಂದು ಸರ್ವಜ್ಞನಂಥವರ ಬಾಯಲ್ಲಿ ಹೇಳಿಸಿತು. "ಆಕಾಶಾತ್ ಪತಿತಂ ತೋಯಂ ಯಥಾಗಚ್ಛತಿ ಸಾಗರಂ ಸರ್ವದೇವ ನಮಸ್ಕಾರ: ಕೇಶವಂ ಪ್ರತಿಗಚ್ಛತಿ" ಎಂದು ಸುಭಾಷಿತಗಳಲ್ಲಿ ಹಾಡಿತೇ ವಿನಃ ಯಾರನ್ನೂ ಕೊಲ್ಲಲಿಲ್ಲ; ಕೊಲೆಗೆ ನಾಂದಿಯಾಗಲಿಲ್ಲ.

ಇತಿಹಾಸ ಏನೆಲ್ಲವನ್ನು ನೋಡಿದೆ. ಆ ಇತಿಹಾಸವನ್ನು ನಾವು ನೋಡಿದ್ದೇವೆ. ಮತಾಂಧ ಆಳರಸರ ಆಳ್ವಿಕೆಗಳಲ್ಲಿ ನೂರಾರು ಮಂದಿರಗಳು ಮಸೀದಿಗಳಾದವು. ಚರ್ಚುಗಳಾದವು. ರಾತ್ರಿ ಬೆಳಗಾಗುವುದರಲ್ಲಿ ಅನೇಕ ಹಿಂದೂಗಳು ಮುಸಲ್ಮಾನರಾದರು. ಕ್ರೈಸ್ತರಾದರು. ಆದರು. ಹೌದು. ಅದು ಬೇರೆ ಕಾಲ. ಆಳರಸರು

ತ್ರೀವೆನ್ನುವದು ಅದಕ್ಕೂ ಮೂರ್ಖತನದ ಮಾತು. ಎಲ್ಲ ಧರ್ಮಗಳ ತಿರುಳೂ ಒಂದೇ — ದಯೆ. ಪ್ರೀತಿ, ಪ್ರೇಮ. ತಿರುಳು ಎಂದಿದ್ದರೂ ಹಣ್ಣಿನ ಒಳಗೆ. ಮೇಲಿನ ಸಿಪ್ಪೆಗಳ ಬಣ್ಣ ಕಾಲ ದೇಶಗಳಲ್ಲಿ–ಕಾಲಕಾಲಕ್ಕೆ ಅನಿವಾರ್ಯವಾಗಿ ಬದಲಾಗುತ್ತದೆ. ಅದು ಸಿಪ್ಪೆಯ ಗುಣ. ಹಾಗೆಂದು ಸಿಪ್ಪೆಯೇ ತಿರುಳಾಗುವದಿಲ್ಲ. ಹಾಗೆ ಭ್ರಮಿಸಿದಾಗ ಮಾತ್ರ ಅನಾಹುತಗಳಾಗುತ್ತವೆ. ಒಳಗಿನ ತಿರುಳಿಗೂ ಧಕ್ಕೆಯಾಗುತ್ತದೆ. ಧರ್ಮವಿರುವದು, ಧರ್ಮದ ತಿರುಳಿರುವದು ಕಲ್ಲು ಇಟ್ಟಿಗೆಗಳ ಗೋಡೆಗಳಲ್ಲಿ ಅಲ್ಲ, ಗೋಪುರ ಗುಮ್ಮಟಗಳಲ್ಲಿ ಅಲ್ಲ, ಕಲ್ಲು ಇಟ್ಟಿಗೆಗಳನ್ನು ಕಚ್ಚಿ ಹಿಡಿದ ಗಚ್ಚು ಗಾರೆಗಳಲ್ಲೂ ಅಲ್ಲ, ಏನಿದ್ದರೂ ಅದು ಇರುವದು ಗರ್ಭಗುಡಿಯಲ್ಲಿ ಹೃದಯಗಳಲ್ಲಿ. ಪ್ರೀತಿ ಪ್ರೇಮಗಳ ರೂಪದಲ್ಲಿ, ಅನುಕಂಪವಾಗಿ, ದಯೆಯಾಗಿ. ಇವುಗಳಿಲ್ಲದ ಧರ್ಮ ನಮಗೆ ಬೇಕಿಲ್ಲ.

ಸ್ವಧರ್ಮಕ್ಕಿಂತಲೂ ರಾಷ್ಟ್ರಧರ್ಮ ಹಿರಿದು. ಅದನ್ನು ಮರೆತಾಗ ಸ್ವಧರ್ಮಕ್ಕೆ ನೆಲೆಯಿರವುದಿಲ್ಲ. ರಾಷ್ಟ್ರಧರ್ಮವನ್ನು ಪಾಲಿಸಲು ಕಲಿಯಬೇಕು, ಬದುಕು ನಾವು ಎಣಿಸಿದಷ್ಟು ದೀರ್ಘವಲ್ಲ. ಬರೀ ಕೊಲ್ಲುವ, ಕೊಲಿಸಿಕೊಳ್ಳುವದರಲ್ಲೇ ಬದುಕು ಸಾಯಬಾರದು. ಬದುಕು ಇರುವುದು ಏನನ್ನಾದರೂ ಸಾಧಿಸಲು. ಸಾಧಿಸುವ ಕೆಲಸ ಶಾಂತಿ–ಸಮಾಧಾನಗಳಿಲ್ಲದಿದ್ದರೆ ಆಗುವದಿಲ್ಲ. ಸಾವು ಬಂದಾಗ ಬಂದಾಗ ಬರಲಿ. ಅದನ್ನು ಕಾಯುವದೂ ಬೇಡ, ಆಹ್ವಾನಿಸುವುದೂ ಬೇಡ. ಧರ್ಮ- ಸಂಜೀವಿನಿ ತಳವೂರಲು ಅನಿವಾರ್ಯವಾಗಿ ಹಾಗೆ ನಡೆದ ಕಾಲ. ನಡೆಸಿದ ಕಾಲ. ಮೂರ್ಖರ ಕಾಲ. ಇದು ಎಲ್ಲರಿಗೂ ಗೊತ್ತಿದ್ದ ಸತ್ಯ. ಹಾಗೆಂದು ಈಗ ನಾವೂ ಮೂರ್ಖರಾಗುಯಾಗಬೇಕು. ಮಾರಕಾಸ್ತ್ರವಾಗಬಾರದು. 'ನಿನ್ನೆ' ನ ಮೇಲೆಯೇ 'ಇಂದು' ಎದ್ದು ನಿಂತಿರುತ್ತದೆ. ಹಾಗಂತ ಕಳೆದ 'ನಿನ್ನೆ' ಯನ್ನು ಅಗೆದು 'ನಿನ್ನೆ ಇಂದಿನಂತಿರಲಿಲ್ಲ ಅದು ಹೀಗಿತ್ತು' ಎಂದು ಸಿದ್ಧ ಮಾಡಹೊರಟರೆ – ಇಂದು 'ನಿನ್ನೆ' ಯಾಗುತ್ತದೆ. 'ನಿನ್ನೆ'ಯು ಕೆಳಗೆ ಸಿಕ್ಕು ಗೋರಿಯಾಗುತ್ತದೆ. ಕಳೆದ 'ನಿನ್ನೆ' ಗಾಗಿ 'ಇಂದು' ಸಾಯುವದು ಬೇಡ. 'ಇಂದಿ' ಗೂ ಬದುಕುವ ಹಕ್ಕಿದೆ. ಅದನ್ನು ಬದುಕಗೊಡಬೇಕು. ಬದುಕ ಬಿಡಬೇಕು.

ಈಗ ನಮ್ಮೆದುರು ಇದ್ದುದು ರಾಷ್ಟ್ರ ಕಟ್ಟುವ ಕೆಲಸವಲ್ಲ – ಅದನ್ನು ಉಳಿಸುವ, ಕಾಯುವ ಕೆಲಸ ಮಾತ್ರ ಉಳಿದಿದೆ.

ಈಗ ಹಿಂದೂ ಮುಸ್ಲಿಮ್ ಬಾಂಧವರೆದುರು ನಿನ್ನೆಗಿಂತಲೂ ಹೆಚ್ಚು ಸಮಸ್ಯೆಗಳಿವೆ. ಜವಾಬ್ದಾರಿಗಳಿವೆ.

'ಈ ರಾಷ್ಟ್ರ ಬರೀ ಹಿಂದೂಗಳದ್ದಲ್ಲ, ಬರೀ ಸಿಕ್ಖರದ್ದಲ್ಲ. ಜೈನ, ಬೌದ್ಧ, ಕ್ರೈಸ್ತ, ಫಾರಸೀಕರಿಗೆ ಮಾತ್ರವಲ್ಲ. ಈ ರಾಷ್ಟ್ರ ಮುಸ್ಲಿಮರದೂ ಕೂಡ. ಈ ಮಣ್ಣಲ್ಲಿ ಹುಟ್ಟಿ, ಇದೇ ನೀರನ್ನು ಕುಡಿದು, ಇದೇ ಗಾಳಿಯನ್ನ ಉಸಿರಾಡಿದ ನೀವು ಹೋಗಿ

ನವರು ಹೇಗಾದೀರಿ' ಎಂದು ತಿಳಿಹೇಳುವ, ನಂಬಿಸುವ, ಖಾತ್ರಿ ಮಾಡಿಸುವ ಗುರುತರ ಜವಾಬ್ದಾರಿ ಹಿಂದೂ ಬಾಂಧವರ ಮೇಲಿದ್ದರೆ-ನಮ್ಮ ವೈಯಕ್ತಿಕ ಧಾರ್ಮಿಕ ಆಚರಣೆ ರಾಷ್ಟ್ರ ಧರ್ಮಕ್ಕೆ ಪ್ರತಿಕೂಲವಾಗಿ ನಿಲ್ಲುವದಿಲ್ಲ ನಿಲ್ಲಗೊಡುವುದಿಲ್ಲ. ಅದೇ ಬಿಸಿಲು, ಅದೇ ಗಿಡದ ನೆರಳು ನಮಗೂ ಇರುವಾಗ, ರಾಷ್ಟ್ರದ ಮುಖ್ಯ ವಾಹಿನಿಯಲ್ಲಿ ನಾವೂ ಒಂದಾಗುವಾಗ ಅದು ಹೇಗೆ ಸಿಡಿದು ನಿಲ್ಲಲು ಸಾಧ್ಯ? ನಮಗೂ ಸಾಂವಿಧಾನಿಕ ಏಕರೂಪತೆಯಿರಲಿ ನಾವೂ 'ವಂದೇ ಮಾತರಂ' ಹೇಳುತ್ತೇವೆ. ತಾಯಿಗೆ ವಂದಿಸುವಲ್ಲಿ ಅಪಮಾನವೆಲ್ಲಿಯದು; ತಾಯಿ ಎಂದಿಗೂ 'ವಂದ್ಯಳೇ' ಎನ್ನುವ ದೃಢ ನಿಲುವು; ದೃಢ ನಿರ್ಧಾರ. ತೆಗೆದು ಕೊಳ್ಳುವ ಕಾಲ ಸನ್ನಿಹಿತವಾಗಿದೆ ಮುಸ್ಲಿಮ್ ಬಾಂಧವರ ಪಾಲಿಗೆ.

ಆಗ ಮಾತ್ರ ನಾವು ಬದುಕಬಹುದು. ಹುಟ್ಟಲು ತಹತಹಿಸುತ್ತಿರುವ ಲಕ್ಷ ಲಕ್ಷ ಗರ್ಭಸ್ಥ ಶಿಶುಗಳಿಗೆ ನಾಳಿನ ಸೂರ್ಯೋದಯದ ದರ್ಶನ ಮಾಡಿಸಬಹುದು.

# ಮನು V/S ಬಸವ

## ಸಿ. ಕೆ. ಮಹೇಶ್

ಸ್ವಾತಂತ್ರ್ಯೋತ್ತರದಲ್ಲಿ ಭಾರತಾಂಬೆ ಅನೇಕ ಬಾರಿ ಅತ್ಯಾಚಾರಕ್ಕೆ ಒಳಗಾಗಿರುವಳು. ಇದರಲ್ಲಿ ಎರಡು ಅತ್ಯಾಚಾರಗಳಂತೂ ಜಗತ್‌ಪ್ರಸಿದ್ಧವಾದವು. ಒಂದು; ಗಾಂಧಿಯ ಕಗ್ಗೊಲೆಯ ಅತ್ಯಾಚಾರ ಮತ್ತೊಂದು ಬಾಬ್ರಿ ಮಸೀದಿಯ ಧ್ವಂಸದ ಅತ್ಯಾಚಾರ. ದಲಿತರ ರಕ್ತದಲ್ಲಿ ರಚಿಸಿರುವ ಭಾರತದ ಚರಿತ್ರೆಯ ಪುಟಗಳಿಗೆ ಈ ಎರಡು ಘಟನೆಗಳ ಸೇರ್ಪಡೆ ಒಂದು ಬಗೆಯಲ್ಲಿ ಎರಡು ಹೊಸ ಕರಾಳ ಪರ್ವಗಳ ಆರಂಭವೆನಿಸಿದೆ. ಗಾಂಧಿಯ ಕೊಲೆ ಮತ್ತು ಮಸೀದಿಯ ವಿನಾಶದಲ್ಲಿ ಹರಿದಿರುವ ಸಿದ್ಧಾಂತ ಒಂದೇ. ಶತ-ಶತಮಾನಗಳಿಂದ ಯಾವ ತತ್ವ ಈ ದೇಶವನ್ನು ಹರಿದು ಹಂಚಿಹಾಕಿದೆಯೋ ಯಾವ ಮೌಲ್ಯ ಈ ನಾಡಿನ ಜನರನ್ನು ಧಾಳಾಗಿ ಕಾಣುವಂತೆ ಸೀಳಿದೆಯೋ ಅದೇ ವೈದಿಕ ದರ್ಶನವೇ ಈ ಕ್ರಿಯೆಗಳ ಹಿಂದಿರುವ ತತ್ವ.

೧೯೯೨, ಡಿಸೆಂಬರ ೬ರ ರವಿವಾರ ಈ ನೆಲಕ್ಕೆ ರವಿಯ ಕಿರಣಗಳೇ ಕಾಣದ ದಿನ. ಅಂದು ಎರಡು ವಿಪರ್ಯಾಸಗಳು ಘಟಿಸಿದವು. ಬೆಳಕಿನ ಕಣಗಳಿಗಾಗಿ ತಡಕಾಡುವ ದಲಿತರು ಅಂದು ತಮ್ಮ ಸೂರ್ಯನಾದ ಡಾ. ಬಿ.ಆರ್. ಅಂಬೇಡ್ಕರರ ಮರಣದ ದಿನವನ್ನು ದೇಶದಾದ್ಯಂತ ಅಸಮಾನತೆಯ ದಿನವಾಗಿ ಒಂದೆಡೆ ಆಚರಿ

ಪೌರಾಣಿಕ ಪುರುಷನೋ ಅಥವಾ ಚಾರಿತ್ರಿಕ ಪುರುಷನೋ ಅಥವಾ ದೇವರೋ ಅಥವಾ ದೇವರ ಅವತಾರವೋ ಎಂಬುದೇ ಇನ್ನೂ ನಿರ್ಧರಿತರದ. ಅದೆಂದೋ ತ್ರೇತಾಯುಗದಲ್ಲಿ ಬದುಕಿದ್ದನೆಂದು ಕಲ್ಪಿತರುವ ಶ್ರೀ ರಾಮಚಂದ್ರನ ಜನ್ಮವು ಡಿಸೆಂಬರ ೬ ಎಂದೇ ಪುರೋಹಿತ ವರ್ಗ ಆರೋಪಿಸಿದೆ. ಜತೆಗೆ, ಶ್ರೀರಾಮ ಅಯೋಧ್ಯೆಯ ಬಾಬ್ರಿ ಮಸೀದಿ ಇದ್ದ ಜಾಗದಲ್ಲೇ ಜನಿಸಿದ್ದನೆಂದೂ ನಿಶ್ಚಯಿಸಿದೆ. ಇವರ ಈ ವಿಚಾರ ಅತ್ಯಂತ ಅತಾರ್ಕಿಕ, ಅವೈಚಾರಿಕ ಮತ್ತು ಅವೈಜ್ಞಾನಿಕ ಮಾತ್ರ. ಚರಿತ್ರೆಯ ಪ್ರಜ್ಞಾಶೂನ್ಯತೆಯ ಪ್ರತೀಕ.

ಸುತ್ತಿದ್ದರೆ, ಮತ್ತೊಂದೆಡೆ ಈ ನಾಡಿನ ಪುರೋಹಿತ ವರ್ಗ, ಬಹು ಕಾಲದಿಂದ ಗರ್ಭದಲ್ಲೇ ಅವಿತುಕೊಂಡಿದ್ದ ಮನುವಿಗೆ ಮರುಹುಟ್ಟು ಕೊಡಲು ಹವಣಿಸಿದರು. ಬಾಬ್ರಿ ಮಸೀದಿಯ ಧ್ವಂಸ ಕೇವಲ ಭೌತಿಕವಾದುದು ಮತ್ತು ಅದೊಂದು ಸಂಕೇತ ಮಾತ್ರ. ಮಸೀದಿಗೆ ಬಿದ್ದ ಒಂದೊಂದು ಹೊಡೆತ ವಾಸ್ತವವಾಗಿ ಈ ನಾಡಿನ **ಜೀವಪರ ಮೌಲ್ಯಗಳಿಗೆ** ಬಿದ್ದ ಹೊಡೆತ. ಮನುಸಿದ್ಧಾಂತದ ವಿರುದ್ಧವಾಗಿಯೇ ತ್ರಾಸದಾಯಕವಾಗಿ ಬಹು ಹಿಂದಿನಿಂದಲೂ ರೂಪಿಸಿಕೊಂಡು ಬಂದ ಪರಧರ್ಮ ಸಹಿಷ್ಣುತಾ ಭಾವನೆಗಳಿಗೆ ಅಂದು ಕೊಡಲಿ ಪೆಟ್ಟು ಬಿತ್ತು. ಪ್ರಸ್ತುತ ಸಂವಿಧಾನದ ಅಡಿಪಾಯವಾದ 'ಧರ್ಮ ನಿರಪೇಕ್ಷ' ತತ್ವವನ್ನೇ ಅಲುಗಾಡಿಸಿತು.

ಪುರೋಹಿತ ಶಾಹಿಯ ಇಂಥ ಹುಚ್ಚು ಕುಣಿತ ಈ ನಾಡಿಗೇನು ಇದು ಹೊಸದಲ್ಲ. ಚರಿತ್ರೆಯ ಉದ್ದಗಲದಲ್ಲಿ ಇದರ ಈ ಕ್ರೌರ್ಯದ ಮುಖ ಗೋಚರಿಸುತ್ತ ಹೋಗಿರುವುದು ಸರ್ವೇಸಾಮಾನ್ಯ. ಅತ್ಯಂತ ಪುಕ್ಕಲು ಸ್ವಭಾವದ ಈ ಸಿದ್ಧಾಂತ ಅತಿ ಎಚ್ಚರಿಕೆ ವಹಿಸಿ ವರ್ತಿಸುತ್ತದೆ. ತನ್ನನ್ನು ಎದುರಿಸುವ ವಿಚಾರಗಳು ತನಗಿಂತಲೂ ಸತ್ವಪೂರ್ಣ, ಬಲಯುತ, ಗಟ್ಟಿಮುಟ್ಟೆಂದು ಭಾವಿಸಿದಾಕ್ಷಣ ಬಾಲ ಮುದುರಿಕೊಂಡು, ವಿರೋಧವನ್ನು ಮರೆ ಮಾಡಲು 'ರಾಜೀಸೂತ್ರ' ವನ್ನು ಅನುಸರಿಸುತ್ತದೆ. ಅಂತರಿಕವಾಗಿಯೇ ತನ್ನ ಪ್ರಾಮುಖ್ಯತೆಗಾಗಿ ಕಾಯುತ್ತಿರುತ್ತದೆ. ಒಳಗೊಳಗೇ ಹೊಸ ಶಕ್ತಿಯನ್ನು ಕ್ರೋಢೀಕರಿಸುತ್ತ ಒಮ್ಮೆಲೇ ಸ್ಫೋಟಿಸಿಬಿಡುತ್ತದೆ, ಆ ಮುಖೇನ ಜೀವ ಪರ ವಿಚಾರಧಾರೆಗಳಿಗೆ ಅದೆಷ್ಟೋ ವರ್ಷಗಳ ಹಿಂದಕ್ಕೆ ಒಮ್ಮೆಗೇ ಎಸೆಯುತ್ತವೆ. ಬ್ರಾಹ್ಮಣ್ಯದ ವಿಕಾಸತೆಯ ಚರಿತ್ರೆ ಅರಿತವರಿಗೆ ನನ್ನ ಈ ಆರೋಪಗಳು ಬೊಗಳೆಯಾಗಿ ಕಾಣಲು ಸಾಧ್ಯವಿಲ್ಲ.

ಬುದ್ಧ, ಬಸವ, ಅಂಬೇಡ್ಕರರು ತಮ್ಮ ಅಪಾರ ಗ್ರಂಥರಾಶಿಯಲ್ಲಿ ಬ್ರಾಹ್ಮಣ್ಯದ ಇಂಥ ಸಂಚನ್ನು ಹೊರಚೆಲ್ಲಿರುವರು. ಆದರೂ ಅದನ್ನು ನಾವು ಸರಿಯಾಗಿ ಪರಿಗ್ರಹಿಸುವುದರಲ್ಲಿ ಪದೇ ಪದೇ ಸೋಲುತ್ತಿದ್ದೇವೆ. ಬುದ್ಧ-ಬಸವರ ತರುವಾಯ

ಆಧುನಿಕ ಭಾರತದಲ್ಲಿ ಕ್ರಿಯೆ ಮತ್ತು ಸತ್ತ್ವಪೂರ್ಣ ಚಿಂತನೆಗಳ ಮುಖೇನ "ಪರಿಷ್ಕೃತ ವರ್ಣಾಶ್ರಮ ಸಿದ್ಧಾಂತ"ಕ್ಕೆ ಶಕ್ತಿಪೂರ್ಣ ಸವಾಲು ಹಾಕಲು ಸಾಧ್ಯವೇ ಆಗಿಲ್ಲ. ಅಂಬೇಡ್ಕರ ಮತ್ತು ಲೋಹಿಯಾರು ಈ ವಿಚಾರದಲ್ಲಿ ಅಭಿನಂದನಾರ್ಹರಾದರೂ ಅವರ ಚಿಂತನೆ ಮತ್ತು ಕ್ರಿಯೆಗಳು ವಿಸ್ತೃತ ತಳಹದಿಯಲ್ಲಿ ನೆಲೆಗೊಳ್ಳಲಿಲ್ಲ. ಇದೊಂದು ದೊಡ್ಡ ದುರಂತ.

ಗಾಂಧಿಯನ್ನು ಕೊಲ್ಲುವಾಗ ಮನು ಸಂತತಿಗಳ ಆವರಣದ ಶಕ್ತಿ ತೀರಾ ಅಲ್ಪವಾಗಿತ್ತು. ಜೀವ ವಿರೋಧಿ ಮೌಲ್ಯಗಳ ಆರಾಧಕರೇ ಅದರ ಪ್ರತಿಸ್ಥಾಪನೆಗೆ ಅಸ್ತ್ರಗಳನ್ನು ಹಿಡಿಯಬೇಕಾದ ಅನಿವಾರ್ಯತೆಯಲ್ಲಿದ್ದರು. ಅದರಿಂದಲೇ ಗಾಂಧಿಯನ್ನು ಕೊಂದ ಗೋಡ್ಸೆ ಜಾತಿ ವ್ಯವಸ್ಥೆಯ ಉತ್ತುಂಗ ಶಿಖರದವನಾಗಿದ್ದ. ಆದರೆ ಅದರ ಪ್ರಭಾವ ಈಗ ಸರ್ವ ಬಗೆಯಲ್ಲೂ ಹಿಗ್ಗಿದೆ. ತನ್ನ ಗರ್ಭದೊಳಗೆ ಅನೇಕ ವಿಚಾರ ಧಾರೆಗಳನ್ನು ಜೀರ್ಣಿಸಿಕೊಂಡಿದೆ. ಅಸ್ತ್ರಗಳನ್ನು ತನ್ನವರೇ ಹಿಡಿಯಬೇಕಾಗಿಯೂ ಇಲ್ಲ. ತನ್ನ ಕಾರ್ಯವನ್ನು ಶೋಷಿತರಿಂದಲೇ ನೆರವೇರಿಸುತ್ತದೆ. ಅವಮಾನಿತರ ತಲೆಗಳನ್ನು ಅವಮಾನಿತರಿಂದಲೇ ತೆಗೆಸುತ್ತದೆ. 'ಹಿಂದೂ' ಅನ್ನುವ ಪದ ಇದಕ್ಕೆ ಹಿಮಾಲಯ ಶಕ್ತಿಯನ್ನು ತುಂಬಿದೆ. ಈ ಪದವೇ ವೈದಿಕ ವಿಚಾರಧಾರೆಗೆ 'ಆಕ್ಟೋಪಸ್' ಹಿಡಿತಕ್ಕೆ ಸನ್ನೆಗೋಲಾಗಿದೆ. ಈ ಸನ್ನೆಯಿಂದ ಪುರೋಹಿತಶಾಹಿ ಸಿದ್ಧಾಂತ ದೇಶದ ಸರ್ವಧರ್ಮ, ಸರ್ವ ಸಂಸ್ಕೃತಿ, ಸರ್ವ ಜನರ ಬದುಕುಗಳನ್ನು ನಿಯಂತ್ರಿಸುತ್ತಿದೆ. ಬೌದ್ಧ, ಜೈನ, ವೀರಶೈವ ಮತ್ತು ಸಿಖ್ ಧರ್ಮಗಳನ್ನು ಗಲಿಬಿಲಿಗೊಳಿಸಿದೆ. ಈ ಧರ್ಮಗಳ ಜನರೂ ಗೊಂದಲದಲ್ಲಿ ಸಿಲುಕುವಂತಹ ವಾತಾವರಣ ಸೃಷ್ಟಿಸಿದೆ. ಇದಕ್ಕೆ ಸ್ಪಷ್ಟ ನಿದರ್ಶನ ಈ ನಾಡಿನ ಬಸವ ಪ್ರೇರಿತ ಮಠಗಳು ಮತ್ತು ಅನುಚರರು ಬ್ರಾಹ್ಮಣ್ಯದ ಮರು ಹುಟ್ಟಿನ ಸೂಕ್ಷ್ಮತೆಯನ್ನು ಅರಿಯದೆ 'ರಾಮರಥ' 'ರಾಮ ಪಾದುಕೆ' ಮತ್ತು 'ಕರಸೇವೆ' ಎಂಬ ನಾಟಕಗಳಲ್ಲಿ ತಾವೂ ಪ್ರಮುಖ ಪಾತ್ರಧಾರಿಗಳಾಗಿ ಕಾಣಿಸಿದ್ದನ್ನು ಸ್ಮರಿಸಬಹುದು. ಇದಕ್ಕೆ ಒಂದೆರಡು ಮಠಗಳು ಮತ್ತು ಕೆಲವು ವ್ಯಕ್ತಿಗಳ ಅಪವಾದ ಉಂಟು.

ಆದರಿಂದ, ಡಿಸೆಂಬರ, ೬ ರಂದು ಸ್ಫೋಟಿಸಿದ್ದು ಮೇಲ್ಪದರದಲ್ಲಿ ಕಾಣುವಂತಹ ಮಂದಿರ ಮಸೀದಿಗಳ ಸ್ಫೋಟಕವಲ್ಲ. ಹಾಗೆಯೇ ಬಿ ಜೆ ಪಿ ಎಂಬ ರಾಜಕೀಯ ಪಕ್ಷ ರಾಜಕೀಯ ಶಕ್ತಿಯನ್ನು ಪಡೆಯುವುದಕ್ಕಾಗಿ ನಡೆಸಿದ ಯತ್ನವೂ ಇದಲ್ಲ. ಇದಕ್ಕೆ ಬದಲಾಗಿ ಇದೊಂದು ಜೀವವಿರೋಧಿ ಸಂಸ್ಕೃತಿಯನ್ನು ಭದ್ರಗೊಳಿಸಲು ನಡೆಸಿದ ಸಂಘರ್ಷ. ಇದಕ್ಕೆ ಅನೇಕ ಪುರಾವೆಗಳನ್ನು ಸ್ವತಂತ್ರ ಭಾರತದ ರಾಜಕೀಯ ಚರಿತ್ರೆಯಲ್ಲಿಯೇ ವಿಪುಲವಾಗಿ ಪಡೆಯಬಹುದು. ಪ್ರಧಾನ ಮಂತ್ರಿ

ಶ್ರೀ ನರಸಿಂಹರಾವ, ಶ್ರೀ ಬಾಳಾದೇವರಸ, ಶಂಕರಾಚಾರ್ಯರ ಮಠಾಧಿಪತಿಗಳು, ಶ್ರೀ ಮನೋಹರ ಜೋಷಿ ಮತ್ತು ಇತರ ಪ್ರಮುಖರೊಡನೆ ಡಿಸೆಂಬರ ೬ ಕ್ಕೂ ಮೊದಲೇ ನಡೆಸಿರುವ ಒಳ ಸಂವಾದ ಮತ್ತು ಆಂತರಿಕ ಒಪ್ಪಂದ ನಮಗೆ ಹತ್ತಿರ ವಾಗಿ ಸಿಗುವ ಒಂದು ಗಂಭೀರ ಸಾಕ್ಷಿ. ಪತ್ರಿಕೆಗಳ ಒಂದು ವರದಿ ಪ್ರಕಾರ ಕೇಂದ್ರ ಗೃಹ ಸಚಿವಾಲಯ ನವೆಂಬರ್ ೨೭ ಕ್ಕೂ ಮೊದಲೇ ಪ್ರಧಾನ ಮಂತ್ರಿಗಳಿಗೆ ಉತ್ತರ ಪ್ರದೇಶ ಸರ್ಕಾರವನ್ನು ವಜಾಗೊಳಿಸಲು ನೀಡಿದ ಸಲಹೆಯನ್ನು ಪ್ರ. ಮಂತ್ರಿಗಳು ನಿರ್ಲಕ್ಷಿಸಿದ್ದು ಇದರ ಎರಡನೇ ಪ್ರಬಲ ಪುರಾವೆ. ಇದಕ್ಕೂ ಬಲಯುತವಾದ ಆಧಾರವೆಂದರೆ ಆರ್. ಎಸ್. ಎಸ್. ಅನೇಕ ಬಾರಿ ಕಾಂಗ್ರೆಸ್‌ಗೆ ಚುನಾವಣೆಗಳಲ್ಲಿ ಸಹಕರಿಸಿರುವುದು. ಅದರಲ್ಲಂತೂ ತುರ್ತು ಪರಿಸ್ಥಿತಿ ಸಂದರ್ಭದಲ್ಲಿ ರಾಷ್ಟ್ರೀಯ ಸ್ವಯಂ ಸ ಘವ ಸರ ಸಂಘ ಸಂಚಾಲಕ ಶ್ರೀ ಬಾಳಾದೇವರಸ ಮತ್ತು ದಿ: ಶ್ರೀಮತಿ ಇಂದಿರಾ ಗಾಂಧಿಯವರ ಮಧ್ಯೆ ನಡೆದ ಪತ್ರ ವ್ಯವಹಾರಗಳನ್ನು ಇಲ್ಲಿ ನೆನೆಯ ಬಹುದು.

ಈ ಹಿನ್ನೆಲೆಯಲ್ಲಿ ನಾವಿದನ್ನು ರಾಜಕೀಯ ಶಕ್ತಿಗಾಗಿ ಬಿ.ಜೆ.ಪಿ. ನಡೆಸಿದ ಹುನ್ನಾರ ವೆಂದು ಭಾವಿಸುವುದು ನಮ್ಮನ್ನು ತೀವ್ರತರ ಅನಾಹುತಕ್ಕೆ ತಳ್ಳುತ್ತದೆ. ಮನು-ಕೌಟಿಲ್ಯ, ಶಂಕರಾಚಾರ್ಯರು ಈ ದೇಶದ ಅತ್ಯದ್ಭುತ ಚಿಂತಕರು, ತತ್ವಜ್ಞಾನಿಗ ಳೆಂದೇ ಪರಿಗಣಿಸುವ ಆರ್. ಎಸ್. ಎಸ್. ಮತ್ತು ಅದರ ಪರಿವಾರ ಹೊಸೆದಿರುವ ಅತ್ಯಂತ ಬಲಯುತವಾದ ತಾತ್ವಿಕ ಬಲೆಯ ಬೀಸಣಿಕೆಯೇ ಡಿಸೆಂಬರ ೬ ರ ಸ್ಫೋಟಕ. ಅದು ತನ್ನ ಆಳದ ಪದರಲ್ಲಿ ಮನುವನ್ನು ಹುದುಗಿಸಿಕೊಂಡು ಮೇಲ್ಪದರ ಒಂದು ಪಾರ್ಶ್ವದಲ್ಲಿ "ಮುಸ್ಲಿಂ ವಿರೋಧಿ" ತನ ಪ್ರದರ್ಶಿಸುತ್ತಾ ಮತ್ತೊಂದು ಪಾರ್ಶ್ವ ದಲ್ಲಿ ಸರ್ವ ಜನ ಸುಖಿನೋ ಭವಂತು 'ಸರ್ವರೂ ಒಂದೇ' (ಹಿಂದೂ ಒಂದೇ) ಅನ್ನುವ ಬಣ್ಣದ ಮಾತುಗಳ ಕಾರ್ಯತಂತ್ರದ ಮೂಲಕ ಸಂಘ ಶತ ಶತಮಾನಗಳ ಅವಮಾನಿತರನ್ನು ಶೋಷಿತರನ್ನು ತನ್ನ ತೆಕ್ಕೆಯಲ್ಲಿ ಅವಚಿಕೊಂಡಿರುವುದು ತೀವ್ರ ಕಳವಳಕಾರಿ ಸಂಗತಿ. ಬಹು ಸಂಖ್ಯಾತ ಜನರನ್ನು ಸುಳ್ಳುಗಳ ಪ್ರಚಾರಗಳ ಮೂಲಕವೇ 'ಸಾಮೂಹಿಕ ಸಮ್ಮೋಹನಕ್ಕೆ' ಒಳಪಡಿಸಿದ್ದಾರೆ. ನಾಜಿಗಳು ಮತ್ತು ಫ್ಯಾಸಿಸ್ಟರು ಬಳಸಿದ ಸುಳ್ಳು ಪ್ರಚಾರದ ಕಾರ್ಯ ತಂತ್ರವನ್ನೇ ಇವರೂ ಅಳವಡಿಸಿ ಕೊಂಡಿರುವರು.

ಮನು ಸಂತತಿಗಳು ರಚಿಸಿರುವ ಈ ಸುಭದ್ರ ವ್ಯವಸ್ಥೆಯ ಕೋಟೆಯಲ್ಲಿ ಬಚ್ಚಿಟ್ಟಿರುವ 'ಮನು-ಕೌಟಿಲ್ಯ-ಶಂಕರಾಚಾರ್ಯ' ರನ್ನು ಹೊರ ತೆಗೆಯಲು ಅವರಷ್ಟೇ ದಷ್ಟ ಪುಷ್ಟದ ವಿಶಾಲ ತಳಹದಿಯ ಸಿದ್ಧಾಂತ ಮತ್ತು ಕಾರ್ಯಕ್ರಮದ ರಚನೆ ಈ

ಸಂದರ್ಭದಲ್ಲಿ ಅನಿವಾರ್ಯ. ಅದಕ್ಕಾಗಿ ಸಧ್ಯದ ನಾಡಿನ ಈ ಸಂಕೀರ್ಣತೆಯುನ್ನು, ಈ ಬಿಕ್ಕಟ್ಟನ್ನು, ಈ ಗೊಂದಲವನ್ನು ಸ್ಪಷ್ಟವಾಗಿ "ಮನುವಿನ ಮರುಹುಟ್ಟು" ಎಂದು ಸ್ಮೃತಿಗಳ ಪುನರ್ ಸ್ಥಾಪನೆ"ಯೆಂದು, "ಪುರೋಹಿತ ಶಾಯಿಗಳ ಅಟ್ಟಹಾಸ ವೆಂದು, 'ಜೀವ ವಿರೋಧಿ ಸಿದ್ಧಾಂತದ ಕುಣಿತವೆಂದೂ'. ಗೋಡ್ಸೆಯ ಜಯವೆಂದೂ ನಾವು ಪರಿಗಣಿಸುವುದು ಉತ್ತಮ. ಆಗ ಮಾತ್ರ ನಮಗೆ ಇದರ ವಿರುದ್ಧ ಸೂಕ್ತ ವಾದ, ಖಚಿತವಾದ ಸಿದ್ಧಾಂತ ಮತ್ತು ಕಾರ್ಯತಂತ್ರ ಹೊಸೆಯಲು ಸಾಧ್ಯ. ಈ ನೆಲೆಯಲ್ಲಿ ನಾವು ಮನು v/s ಬುದ್ಧ ಬಸವ, ಸ್ಮೃತಿ v/s ತ್ರಿಪಿಟಕ, ವಚನ; ಗಾಂಧಿ v/s ಗೋಡ್ಸೆ, ಶಂಕರಾಚಾರ್ಯ v/s ಅಂಬೇಡ್ಕರ, ಎಂಬುದಾಗಿ ಪರಿಗಣಿಸುವದು ಸೂಕ್ತ. ಆಗ ನಮಗೆ ಭರವಸೆಯ ಅಡಿಪಾಯ ಲಭ್ಯವಾಗುತ್ತದೆ.

ಈ ದೆಸೆಯಲ್ಲಿ ನಮ್ಮ ನಾಡಿನಲ್ಲಿ ವಿವಿಧ ಸಿದ್ಧಾಂತಗಳಲ್ಲಿ ಹಂಚಿಹೋಗಿರುವ ಜೀವಪರ ಸಂಸ್ಕೃತಿಯ ಆರಾಧಕರು; ಧರ್ಮ ನಿರಪೇಕ್ಷಗಾರರು ಒಂದೆಡೆ ಒಗ್ಗೂಡುವುದು ಸಧ್ಯದ ಪರಿಸ್ಥಿತಿಯಲ್ಲಿ ಜರೂರಾಗಿ ಸಂಭವಿಸಬೇಕಾದ ಪ್ರಸಂಗ. ಅಂದರೆ ವಿಶಾಲ ಪಾತಳಿ ಮೇಲೆ ಹೊಸೆಯಲ್ಪಡುವ ಒಂದು ಸತ್ವ ಪೂರ್ಣ ಸುಭದ್ರವಾದ ಸಿದ್ಧಾಂತದ ರಚನೆ ಅಗತ್ಯ. ಈ ಹೊಸ ನಿರ್ಮಿತಿಯ ತತ್ವದೊಳಗೆ ಬುದ್ಧ–ಬಸವ-ಲೋಹಿಯಾ-ಗಾಂಧಿ-ಅಂಬೇಡ್ಕರ್ ಮತ್ತು ಮಾರ್ಕ್ಸ್‌ರ ವಿಚಾರಧಾರೆಗಳನ್ನು ಮಿಳಿತಗೊಳಿಸಬೇಕು. ಹಾಗೆ ರೂಪಿಸಿದ ಈ ನೆಲದ ಸಿದ್ಧಾಂತವನ್ನು ಜನರ ಬಳಿಗೆ ತೆಗೆದುಕೊಂಡೋಗಲು ವ್ಯವಸ್ಥಿತವಾದ ಸಾಂಸ್ಕೃತಿಕ ಕಾರ್ಯಕ್ರಮಗಳ ವೇದಿಕೆ ಒಂದನ್ನು ಸಿದ್ಧಪಡಿಸಬೇಕು. ●

---



---

## ಕೆ. ಪಿ. ದೇವೇಂದ್ರಯ್ಯ

# ವಿಚಿತ್ರ ಅನುಭವ

ನನಗಾಗುವ ವಿಚಿತ್ರ ಅನುಭವ
ನಿಮಗಾಗುತ್ತಾ ?

ತುಂಬು ಕೆನ್ನೆಯು, ದುಂಡು ಹೊಟ್ಟೆಯು
ತಿವಿಯುವ ಮೀಸೆಯು, ಕರ್ಕಶ ಶಬ್ದದ
ದರ್ಪದ ದೌಲತ್ತಿನ ಆಜಾನುಬಾಹುಗಳನ್ನು
ನೋಡಿದಾಗಲೆಲ್ಲಾ – ಇವರು ಸತ್ತಾಗ
ಹೆಂಗಿರಬಹುದೆಂದು ಅನಿಸುತ್ತೆ.

ಹೀಗನ್ನಿಸಿದಾಗಲೆಲ್ಲಾ – ಇವರು ಸತ್ತಾಗಿನ
ತೆರೆದ ಬಾಯಿ, ಬಿದ್ದ ಹಲ್ಲು, ಗುಳಿಬಿದ್ದ ಕಣ್ಣು
ಇಳಿಬಿದ್ದ ಮೀಸೆ ನೆನಪಾಗುತ್ತವೆ.

ಆದ್ರೆ, ನಿಜವಾಗ಼್ೂ
ಗುಳಿಬಿದ್ದ ಕಣ್ಣು, ಎಲುಬಿನ ಹಂದರದ
ಬತ್ತಿದ ಮುಖಗಳನ್ನ ನೋಡಿದಾಗ–
ಇವರು ಸತ್ತಾಗ ಹೆಂಗಿರಬಹುದೆಂದು
ಅನ್ನಿಸುವುದೇ ಇಲ್ಲ ನನಗೆ !

ಯಾಕಂದ್ರೆ,
"ಜೀವಂತವಿದ್ರೂ ಸತ್ತವರಲ್ಲವಾ ಇವ್ರು" ?

ಅದಕ್ಕೇ ನಾ ಹೇಳಿದ್ದು
ನನಗಾಗುವ ವಿಚಿತ್ರ ಅನುಭವ
ನಿಮಗಾಗುತ್ತಾ ಎಂದು.

ಡಿ. ಬಿ. ಹತ್ತರಕಿ ಹಾಳ

## ಇಂದಿಲ್ಲ ನಾಳೆ

ಇಂದಿಲ್ಲ ನಾಳೆ
ಮಳೆಯಾಗಿ ಸುರಿದು
ತೊಳೆಯುವೆವು ತುಂಬಿರುವ
ಕೊಳಚೆ ಮಡುಗಳ
ದುರ್ಗಂಧ ನಾತ.

ಇಂದಿಲ್ಲ ನಾಳೆ
ಕೈಗೆ ಸಿಗದ ಪಕ್ಷ-
-ಪಾತಿ ಸೂರ್ಯನ ಹಿಡಿದು
ತರುವೆವು ಗುಡಿಸಲ ಮೇಲೆ
ಬೆಳಕು.

ಇಂದಿಲ್ಲ ನಾಳೆ
ಭೂತಾಕಾರ ನಿಂತ
ಅಸಮಾನತೆಯ ಗೋಡೆ
ಕೆಡವಿ
ಮಾಡುವೆವು ಹಾದಿ.

ಇಂದಿಲ್ಲ ನಾಳೆ
ಹನಿಹನಿಗಳು ಸೇರಿ
ಹೊಳೆಯಾಗಿ
ಹರಿಯುವೆವು ಬಂಡೆಗಳ ನೂಕಿ.

## ಈ ಸಂಚಿಕೆಯ ಲೇಖಕರು

**ಡಾ. ಕೇಶವಶರ್ಮ ಕೆ.** ಪ್ರಾಧ್ಯಾಪಕ, ಕನ್ನಡ ವಿಭಾಗ, ಕುವೆಂಪು ವಿ. ವಿ. ಬಿ. ಆರ್. ಪಿ. ೫೭೭೧೧೫. **ಎಸ್. ಜಿ. ಸಿದ್ದರಾಮಯ್ಯ** ಕನ್ನಡ ಪ್ರಾಧ್ಯಾಪಕ, ಸರಕಾರಿ ಕಲಾ ಕಾಲೇಜು, ತುಮಕೂರು ೫೭೨೧೦೧ **ಲಲಿತಾ ಕೆರಿಮನಿ** ಪೇಟೆಬಣ ಲಕ್ಷ್ಮೇಶ್ವರ ೫೮೨೧೧೬ **ಕೆ. ಫಣಿರಾಜ್** ಪಾಯಸ್ ಕಾಂಪೌಂಡ, ಕೊಟ್ಟಾರ ಕ್ರಾಸ್ ರೋಡ ಮಂಗಳೂರು ೫೭೫೦೦೩ **ಡಾ. ಬಸವರಾಜ ಕುಂಬಾರ** ಹಿಂದಿ ಪ್ರಾಧ್ಯಾಪಕ, ಜಿ. ಎಚ್, ಕಾಲೇಜು, ಹಾವೇರಿ ೫೮೧೧೧೦ **ಡಾ. ವಾಮನ ಬೇಂದ್ರೆ** ಶ್ರೀಮಾತಾ. ಸಾಧನಕೇರಿ, ಧಾರವಾಡ ೫೮೦೦೦೮ **ರಾಜು ಹೆಗಡೆ** ಕನ್ನಡ ಪ್ರಾಧ್ಯಾಪಕ. ಬಂಗೂರ ನಗರ ಕಾಲೇಜು, ದಾಂಡೇಲಿ ೫೮೧೩೨೫ **ಡಾ. ಸಂಜೀವ ಕುಲಕರ್ಣಿ** ಮಲ್ಲಿಗೆ, ೧೯/೨. ಮಹಿಷಿ ರಸ್ತೆ, ಮಾಳಮಡ್ಡಿ, ಧಾರವಾಡ ೫೮೦೦೦೭ **ನೇದರಸ** (ಎಚ್. ಟಿ. ಬೋಳಿಗಾಂವಕರ) ಸ್ಟೇಟಬ್ಯಾಂಕ್ ಆಫ್ ಟ್ರಾವಂಕೂರ, ಕಾಸರಗೋಡ ೬೭೧೧೨೧ **ಸಿ. ಕೆ. ಮಹೇಶ** ಜೆ ಜೆ. ಹಟ್ಟಿ ಚಿತ್ರದುರ್ಗ ೫೭೭೫೦೧ **ಕೆ. ಪಿ. ದೇವೇಂದ್ರಯ್ಯ** ಸಾಸ್ವೆಹಳ್ಳಿ (ಶಿವಮೊಗ್ಗ) ೫೭೭೨೨೪ **ಡಿ. ಬಿ. ಹತ್ತರಕಿಹಾಳ** ಶಿಕ್ಷಕರು, ಸರಕಾರಿ ಪ್ರೌಢಶಾಲೆ, ಕೋಳೂರು (ಬಿಜಾಪುರ) ೫೮೬೧೨೯ **ವಿನಯಾ ನಾಯಕ** c/o ಎಂ. ಡಿ. ವಕ್ಕುಂದ, ಸ. ಪ್ರ. ದ ಕಾಲೇಜು. ರೋಣ ೫೮೨ ೨೦೯

---

## ಸಂಕ್ರಮಣ : ಸೂಚನೆಗಳು

೧ ಕವನ, ಲೇಖನ ಇತ್ಯಾದಿಗಳನ್ನು ಟೈಪು ಮಾಡಿಸಿ ಅಥವಾ ನೀಟಾದ ಅಕ್ಷರಗಳಲ್ಲಿ ಹಾಳೆಯ ಒಂದೇ ಮಗ್ಗುಲಿನಲ್ಲಿ ಬರೆದು ಕಳಿಸಬೇಕು. **ಅಸ್ವೀಕೃತ ಬರಹಗಳನ್ನು ವಾಪಸು ಕಳಿಸುವುದಿಲ್ಲ.**

೨ ಬರಹಗಳ ಸ್ವೀಕೃತಿ / ಅಸ್ವೀಕೃತಿ ಬಗ್ಗೆ ತಿಳಿಯಬೇಕಿದ್ದರೆ ಸ್ವವಿಳಾಸದ ಅಂಚೆ ಕಾರ್ಡು ಜೊತೆಗಿರಿಸಬೇಕು.

೩. ಸಂಕ್ರಮಣದ ಚಂದಾ ಅವಧಿ ಜನವರಿಯಿಂದ ಡಿಸೆಂಬರ. ವರ್ಷದ ಮಧ್ಯದಲ್ಲಿ ಚಂದಾ ಮುಗಿದಿದ್ದರೆ ಆ ವರ್ಷದ ಡಿಸೆಂಬರ ವರೆಗೆ (ಒಂದು ಸಂಚಿಕೆಗೆ ಐದು ರೂ. ಗಳಂತೆ ಲೆಕ್ಕಹಾಕಿ) ಕಳಿಸಬೇಕು.

೪ ಚಂದಾ ಹಣವನ್ನು ಎಂ, ಓ, / ಡಿ. ಡಿ, ಮೂಲಕ ಮಾತ್ರ ಸ್ವೀಕರಿಸಲಾಗುವುದು, (ಚೆಕ್‌ಗಳಿಗೆ ರೂ, ೫ ಬ್ಯಾಂಕ್ ಕಮಿಶನ್ ಸೇರಿಸಬೇಕು)

೫ ಲೇಖಕರ ಪ್ರಕಟನೆಗಳ ಜಾಹಿರಾತುಗಳಿಗೆ ಚಂದಾದಾರರಿಗೆ ಮಾತ್ರ ರಿಯಾಯಿತಿ ಇದೆ, (ಕಾಲು ಪುಟಕ್ಕೆ ರೂ. ೧೦೦ ಮಾತ್ರ.)

ವಿಳಾಸ : **ಸಂಕ್ರಮಣ ಪ್ರಕಾಶನ, ೬೮, ಯುರೇಕಾ ಕಾಲನಿ, ಧಾರವಾಡ ೫೮೦೦೦೧**